# Antaranga

## Udipi, S. I.


ಸಂಪುಟ ೧,
ಸಂಚಿಕೆ ೧೮.



೧೩ ನವಂಬರ್ '೩೮
ಆದಿತ್ಯವಾರ.


# ಅಂತರಂಗ



## ಚಂದಾ ವಿವರ:

**ವಾರ್ಷಿಕ ಚಂದಾ ಮೂರು ರೂಪಾಯಿ.**

ವಿ. ಪಿ. ಕ್ರಮವಿಲ್ಲ. ಹಣವನ್ನು ಮುಂಗಡವಾಗಿ ಕಳುಹಬೇಕು.

**ಬಿಡಿ ಸಂಚಿಕೆ: ಒಂದಾಣೆ.**

ನಿಮ್ಮ ಊರಿನ ಏಜಂಟರಿಂದ ಪಡಕೊಳ್ಳಿರಿ.

## ಜಾಹಿರಾತಿನ ದರ:

| | | | | |
|---|---|---|---|---|
| ಇಡೀ | ಪುಟ | ರೂಪಾಯಿ | ೧೦—೦—೦ | ಒಂದು ಸರ್ತಿಗೆ. |
| ಅರ್ಧ | ,, | ,, | ೫—೦—೦ | ,, |
| ಕಾಲು | ,, | ,, | ೩—೦—೦ | ,, |
| ಅರೆಕಾಲು | ,, | ,, | ೨—೦—೦ | ,, |
| ಕಲಮು ಇಂಚಿಗೆ | ,, | ,, | ೧—೦—೦ | ,, |

## ಜಾಹಿರಾತು ಕೊಡುವವರಿಗೆ ಸಲಹೆ:

೧. ಜಾಹಿರಾತಿನ ವಿಷಯಗಳು ಅಯೋಗ್ಯವಾಗಿ ಕಂಡುಬಂದಲ್ಲಿ ಮುದ್ರಿಸಲಾಗುವುದಿಲ್ಲ.
೨. ಒಂದೇ ಬದಿಯಲ್ಲಿ ವಿವರವಾಗಿ ಬರೆಯಬೇಕು.
೩. ಬದಲಾವಣೆಯಿದ್ದರೆ ಒಂದು ವಾರ ಮುಂಚಿತವಾಗಿ ತಿಳಿಸಬೇಕು.
೪. ಬ್ಲೋಕುಗಳು ವಾಪಾಸು ಬೇಕಾದರೆ ಅವರವರ ಖರ್ಚಿನಿಂದಲೇ ವಾಪಾಸು ಪಡೆಯಬೇಕು.
೫. ಜಾಹಿರಾತಿನ ಬಾಬ್ತು ಹಣವನ್ನು ಮುಂಗಡವಾಗಿಯೇ ಕೊಡಬೇಕು.


ಮಾಲಕರು ಮುದ್ರಕರು ವ ಪ್ರಕಾಶಕರು:
**ಸಪ್ಲೈ ಏಜೆನ್ಸಿ ಲಿಮಿಟೆಡ್,**
**ಉಡುಪಿ.**
ಮುದ್ರಣ ವ ಪ್ರಕಟನಾ ಸ್ಥಳ:
**ಮಣಿಪಾಲ ಪವರ್ ಪ್ರೆಸ್,**
**ಮಣಿಪಾಲ, ಉಡುಪಿ.**

# ಅಂತರಂಗ

## ಚುರುಕು - - - -
## - - - - ಚುಟುಕು

### ಪಟ್ಟ ಯಾರಿಗೆ?

ಮುಂದಿನ ಕಾಂಗ್ರೆಸ್ ಅಧ್ಯಕ್ಷತೆಯನ್ನು ಬೋಸರಿಗೆ ಕೊಡಬೇಕೆಂದು ಕೆಲವು ಪ್ರಾಂತ್ಯಗಳ ಸೂಚನೆ. ಆಝಾದರಿಗೆ ಕೊಡಬೇಕೆಂದು ಮಿಕ್ಕುಳಿದವರ ಕೋರಿಕೆ. ಆಝಾದರು 'ನಿಷ್ಪ್ರಯೋಜಕ ವ್ಯಕ್ತಿ'ಯೆಂದು ಮಿ| ಜಿನ್ನರ ಅಪಪ್ರಚಾರ. ಈ ಅಪಪ್ರಚಾರದ ಪರಿಣಾಮವಾಗಿ ಆಝಾದರಿಗೆ ಪಟ್ಟವಾಗಬಹುದೆ?

ooo

### ಸರ್ವಾಧಿಕಾರಿಯೆ?

ಬ್ರಿಟಿಷ್ ಹೌಸ್ ಆಫ್ ಕಾಮನ್ಸಿನಲ್ಲಿ ಪ್ರಸಿದ್ಧ ರಾಜಕಾರಣಿ ಲಾಯಡ್ ಜಾರ್ಜರು ಚೇಂಬರ್ಲೇನರೊಡನೆ ವಾಗ್ಯುದ್ಧ ಮಾಡುವಾಗ 'ಸರ್ವಾಧಿಕಾರಿಗಳ ಸಹವಾಸದಿಂದ ಪ್ರಧಾನಮಂತ್ರಿಗಳೂ ಸರ್ವಾಧಿಕಾರಿಗಳಂತೆ ಮಾತಾಡುತ್ತಿದ್ದಾರೆ.' ಎಂದು ಹೇಳಿದರು. ಚೇಂಬರ್ಲೇನರು 'ಪ್ರಜಾ-ಸತ್ತ-ಆತ್ಮಕ' ಸರ್ವಾಧಿಕಾರಿಯೆಂದು ಯಾರಿಗೆ ಗೊತ್ತಿಲ್ಲ?

ooo

### ಏಕೀಕರಣ ಮತ್ತೆ...!

ತುಂಗಭದ್ರಾ ಯೋಜನೆಯನ್ನು ಮೊದಲು ಜಾರಿಗೆ ತರಬೇಕು. ಏಕೀಕರಣ ಪ್ರಶ್ನೆಯನ್ನು ಅನಂತರ ಯೋಚಿಸಬಹುದೆಂದು ಬಳ್ಳಾರಿಯ ಸಭೆಯೊಂದರಲ್ಲಿ ಠರಾವಾಗಿದೆ. ಭಾರತಕ್ಕೆ ಸ್ವರಾಜ್ಯ ಸಿಕ್ಕಿದ ಬಳಿಕ ಕರ್ನಾಟಕ ಏಕೀಕರಣ ಪ್ರಶ್ನೆಯ ಕುರಿತು ಯೋಚಿಸಬಹುದೆಂದು ಠರಾವು ಮಾಡದಿರುವುದು ಕರ್ನಾಟಕದ ಪುಣ್ಯವೆನ್ನಬೇಕು!

ooo

**ತಾಟಸ್ಥ್ಯ ಧೋರಣೆಯ ತಮಾಷೆಯನ್ನು ವಿವರಿಸಿದ ಮಿ| ಇಡೆನ್**



ಬ್ರಿಟಿಷ್ ಸರಕಾರದ ತಾಟಸ್ಥ್ಯ ಧೋರಣೆಯು ದೊಡ್ಡ ತಮಾಷೆಯಂತಿದೆ. ಸ್ಪೈನಿನಿಂದ ೧೦,೦೦೦ ಇಟಾಲಿಯನ್ ಸೈನಿಕರನ್ನು ಮುಸ್ಸೋಲಿನಿಯು ಹಿಂದೆ ಕರೆದಿರುವುದಿದ್ದರೆ, ೨೦,೦೦೦ ಹೊಸಸೈನಿಕರನ್ನು ಕಳುಹಿಸಿಕೊಟ್ಟಿದ್ದಾನೆ. ತಾಟಸ್ಥ್ಯಧೋರಣೆಯಿಂದಾಗಿ ಜನರಲ್ ಫ್ರೇಂಕೊನಿಗೆ ಪ್ರತ್ಯಕ್ಷವಾಗಿ ಸಹಾಯ ಮಾಡಿದಂತಾಗುತ್ತದೆ' ಎಂದು ಹೇಳಿದ್ದಾರೆ.

### ವಚನ ಭಂಗ!

ಹೆರ್ ಹಿಟ್ಲರನನ್ನು ಬ್ರಿಟಿಷ್ ಅಧಿಕಾರಿಗಳು ಬಾಯಿತುಂಬಾ ಹೊಗಳುತ್ತಿರುವ ರಹಸ್ಯವು ಬಹಳ ಸ್ವಾರಸ್ಯವಾಗಿದೆ. 'ಕಳ್ಳ ಕಳ್ಳಗೆ ಗಂಟು' ಎಂಬಂತೆ ವಚನ ಭ್ರಷ್ಟರೊಳಗೆ ಮೈತ್ರಿಯು ಹೆಚ್ಚುತ್ತಿರುವುದರಲ್ಲಿ ಆಶ್ಚರ್ಯವಿಲ್ಲ. ಹೆರ್ ಹಿಟ್ಲರನು ಇಷ್ಟರ ವರೆಗೆ ಒಂದೇ ಒಂದು ಭರವಸೆಯನ್ನಾದರೂ ಪಾಲಿಸಲಿಲ್ಲ. ಬ್ರಿಟಿಷರು ಭಾರತಕ್ಕೆ ಕೊಟ್ಟ ಏಕಮಾತ್ರ ಆಶ್ವಾಸನೆಯನ್ನು ಕಾರ್ಯರೂಪಕ್ಕೆ ತರಲಿಲ್ಲ. ವಸ್ತುಸ್ಥಿತಿಯು ಹೀಗಿರುವಾಗ ಬ್ರಿಟಿಷರು ಹಿಟ್ಲರನನ್ನು ಹೊಗಳದೆ ಸುಮ್ಮನಿರಬಹುದೆ?



ಸರಕಾರದ ಸ್ವಾತಂತ್ರ್ಯ ರಕ್ಷಣೆಗಾಗಿ
ಹೋರಾಡುತ್ತಿರುವ ಧೀರ ತರುಣಿ.

# ಸ್ಪೈನಿನ ಎರಡು ವರುಷಗಳ ಭೀಕರ ಯುದ್ಧ.

## ಸ್ವಾತಂತ್ರ್ಯ ಸಮರದ ಕರುಣಾ ಜನಕ ಕಥೆ.



ವಿದೇಶ ಮಂತ್ರಿ
ಆಲ್ವಾರೆಸ್ ಡೆಲ್‌ವಯೋ

**ಸ್ಪೈನ್ ಸರಕಾರವು ಮೇ ೨, ೧೯೩೮ರಲ್ಲಿ ತನ್ನ ಘೋರಣೆಯನ್ನು ಕೆಳಗಿನ ೧೩ ವಿಷಯಗಳಿಂದ ಸ್ಪಷ್ಟಪಡಿಸಿತು:–**

೧ ವಿದೇಶೀಯರು ಸ್ಪೈನಿನ ರಾಜ್ಯಭಾರದಲ್ಲಿ ಕೈಹಾಕದಂತೆ ಮಾಡುವುದು.

೨ ವಿದೇಶೀ ಸೈನ್ಯ ಶಕ್ತಿಯಿಂದ ಸ್ಪೈನಿನ ದಾಸ್ಯ ನಿವಾರಣೆ.

೩ ಪ್ರಜಾಸತ್ತಾತ್ಮಕ ತತ್ವಕ್ಕನುಸಾರವಾಗಿ ಜನರ ಸರಕಾರದ ಸ್ಥಾಪನೆ.

೪ ರಾಷ್ಟ್ರದ ಇಚ್ಛೆಯಂತೆ ರಿಪಬ್ಲಿಕನ್ನು ಸ್ಥಾಪಿಸುವುದು.

೫ ಪ್ರಾಂತಿಕ ಸ್ವಾತಂತ್ರ್ಯವನ್ನು ಮಾನ್ಯಮಾಡುವುದು.

೬ ಎಲ್ಲಾ ಜನರಿಗೆ ಧಾರ್ಮಿಕ ಹಾಗೂ ವೈಯಕ್ತಿಕ ಸ್ವಾತಂತ್ರವನ್ನೀಯುವುದು.

೭ ನ್ಯಾಯ ಸಮ್ಮತವಾದ ಆಸ್ತಿಗಳಿಗೆ ಭದ್ರತೆಯನ್ನೀಯುವುದು ಮತ್ತು ಯುದ್ಧದಲ್ಲಿ ಭಾಗವಹಿಸಿದ ಪರಕೀಯರಿಗೆ ನಷ್ಟ ಧನವನ್ನೀಯುವುದು.

೮ ವ್ಯವಸಾಯಕ ಸುಧಾರಣೆ ಮತ್ತು ಭೂಮ್ಯಾಲಿಕ ತನದಲ್ಲಿ ವ್ಯತ್ಯಾಸ.

೯ ಕೆಲಸಗಾರರ ಹಕ್ಕುಗಳನ್ನು ಮಾನ್ಯಮಾಡುವುದು.

೧೦ ಸ್ಪೈನ್ ಜನರ ಸಾಂಸ್ಕೃತಿಕ, ಶಾರೀರಕ ಮತ್ತು ನೈತಿಕ ಸುಧಾರಣೆ.

೧೧ ಸ್ಪೈನ್ ಸೈನ್ಯವನ್ನು ಜನರ ಸೈನ್ಯವನ್ನಾಗಿ ಮಾರ್ಪಡಿಸುವುದು.

೧೨ ಜನಾಂಗ ಸಭೆಗೆ ಪೂರ್ಣ ಬೆಂಬಲ.

೧೩ ನವ ಸ್ಪೈನಿನ ನವ ಸೃಷ್ಟಿಗೆ ಬೆಂಬಲವೀಯುವವರಿಗೆ ಸಹಾಯ.

ಸ್ಪೈನ್! ಎರಡು ವರುಷಗಳಿಂದ ಸ್ವಾತಂತ್ರ್ಯರಕ್ಷಣೆಗಾಗಿ ಬಿಸಿ ರಕ್ತವನ್ನು ಯುದ್ಧರಂಗದಲ್ಲಿ ಚೆಲ್ಲಾಡಿದ ವೀರ ಯೋಧರ ಭೂಮಿಯಲ್ಲಿ ಈಗಲೂ ಸಮರವು ಏಕಪ್ರಕಾರವಾಗಿ ನಡೆಯುತ್ತಿದೆ. ಈ ಸಮರವು ಇನ್ನೂ ಮುಗಿಯದಿರಲು ಕಾರಣವೇನು? ಒಂದೇ ಭೂಮಿಯಲ್ಲಿ ಹುಟ್ಟಿ ಬೆಳೆದ ಸ್ಪಾನಿಷ್ ಜನರು ಅದೇಕೆ ಪರಸ್ಪರ ಹೊಡೆದಾಡುತ್ತಿದ್ದಾರೆ?



### ರಿಪಬ್ಲಿಕ್ ಸರಕಾರದ ಸ್ಥಾಪನೆ

ಎರಡು ವರುಷಗಳ ಹಿಂದಿನ ಮಾತು. ೧೯೩೬ನೆ ಮಾರ್ಚಿ ತಿಂಗಳಲ್ಲಿ ನಡೆದ ಮಹಾ ಚುನಾವಣೆಯಲ್ಲಿ ಆಗ ತಾನೆ ಜನಪ್ರೀತವಾಗಿದ್ದ ಪಕ್ಷವು ೪೩೦ ಸ್ಥಾನಗಳಲ್ಲಿ ೨೬೦ ಸ್ಥಾನಗಳನ್ನು ಪಡೆದು ರಿಪಬ್ಲಿಕ್ ಸರಕಾರವನ್ನು ಸ್ಥಾಪಿಸಿತು. ಮೆನುವೆಲ್ ಅಝೂನರವರ ಪ್ರಧಾನ ಮಂತ್ರಿತ್ವದಲ್ಲಿ ಸ್ಥಾಪಿಸಲ್ಪಟ್ಟ ಈ ಸರಕಾರವನ್ನು ಸ್ಪೈನಿನ ಸಾಮ್ರಾಜ್ಯಶಾಹೀ ಮನೋವೃತ್ತಿಯ ಧನಿಕರು ಹಳಿಯಲಾರಂಭಿಸಿದರು.



# ಸಿರಿವಂತ ದಂಗೆಗಾರರ ದರೋಡೆ!

## ಬಡಜನರ ಸಂಘಟಿತ ವಿರೋಧ!



ನಿರಪರಾಧಿ ತರುಣಿಯ ಮೇಲೆ ಫ್ರೇಂಕೋ ಸೈನಿಕರ ಬಲಾತ್ಕಾರ.

### ಶ್ರೀಮಂತರ ಪಕ್ಷ

ರಿಪಬ್ಲಿಕ್ ಸರಕಾರವನ್ನು ತುಚ್ಛೀಕರಿಸುತ್ತಿದ್ದ ಸ್ಪೈನಿನ ಶ್ರೀಮಂತ ವರ್ಗವು ಒಂದಾಯಿತು. ಧನಿಕರ ಇಚ್ಛಾನುಸಾರ ಕುಣಿಯುತ್ತಿದ್ದ ಧಾರ್ಮಿಕ ಪಕ್ಷವಾದ ಇಗರ್ಜಿಗಳು ಕೂಡಾ ಅದರೊಡನೆ ಸೇರಿದವು. ದೇಶದ್ರೋಹಿಗಳಾದ ಸೈನ್ಯಾಧಿಕಾರಿಗಳೂ ಅವರೊಡನೆ ಕುಣಿಯಲಾರಂಭಿಸಿದರು. ಪ್ರಜಾಸತ್ತೆಯನ್ನು ನುಚ್ಚುನೂರುಗೊಳಿಸಿ, ಶ್ರೀಮಂತರ ಅಧಿಕಾರವನ್ನು ಸ್ಪೈನಿನಲ್ಲಿಸ್ಥಾಪಿಸಬೇಕೆಂಬ ದೃಢಪ್ರತಿಜ್ಞೆಯನ್ನು ಶ್ರೀಮಂತ ಪಕ್ಷವು ಮಾಡಿಯಾಯಿತು. ಮುಂದೇನು?



### ದಂಗೆಗಾರರ ದಂಗೆ!

ಈ ಶ್ರೀಮಂತ ಪಕ್ಷವು ದೇಶದ ಎಲ್ಲೆಡೆಗಳಲ್ಲಿಯೂ ದಂಗೆಯೇಳುವ ಪ್ರಬಲಯೋಜನೆಯೊಂದನ್ನು ಮಾಡಿತು. ಜನರಲ್ ಫ್ರೇಂಕೋ ಈ ದಂಗೆಗಾರರ ಪಕ್ಷದ ದಳಪತಿಯಾದ ಕೆಲವೇ ದಿನಗಳಲ್ಲಿ ಸರಕಾರೀ ಪಕ್ಷವನ್ನು ಧೂಳು ದೂಸರಿಯಾಗಿ ಮಾಡಬಹುದೆಂದು ಈ ದ್ರೋಹಿಗಳು ನಿರೀ

**ಜನರಲ್ ಫ್ರೇಂಕನ ಪಕ್ಷವು ಯಾವ ಜಾಹೀರು ನಾಮೆಯನ್ನು ಪ್ರಕಟಿಸದಿದ್ದರೂ ಕೆಲವು ಕರಪತ್ರಗಳಲ್ಲಿ ಈ ಕೆಳಗಿನ ಆಶ್ವಾಸನೆಗಳನ್ನು ಕೊಟ್ಟಿದೆ.**

೧ ಎಲ್ಲರಿಗೂ ಉದ್ಯೋಗ.
೨ ಯೋಗ್ಯ ರೀತಿಯ ಉದ್ಯೋಗದ ಏರ್ಪಾಡು.
೩ ರಜಾ ಕಾಲದಲ್ಲಿ ವೇತನ.
೪ ಜನರಿಗೆ ಸಾಂಸ್ಕೃತಿಕ, ಹಾಗೂ ಇತರ ಚಟುವಟಿಕೆಗಳಲ್ಲಿ ಇಂಬು ಕೊಡುವುದು,
೫ ನಿಶ್ಚಿತ ಕೂಲಿ.
೬ ಕೌಟುಂಬಿಕ ಬೆಂಬಲ.
೭ ಹೊಸ ಲೇಬರ್ ಕಾಯಿದೆ.
೮ ಕೃಷಿ ಮೊದಲಾದುವುಗಳಲ್ಲಿ ಬೆಂಬಲ.
೯ ಖಾಸಗಿ ಜಮೀನಿನ ರಕ್ಷಣೆ.
೧೦ ಲಾಭದಲ್ಲಿ ಮಿತಿ.
೧೧ ಸಾಮಾಜಿಕ ವಿಮೆ.
೧೨ ಎಲ್ಲವೂ ಸರಕಾರದಧೀನದಲ್ಲಿರಬೇಕು.
೧೩ ದೊಡ್ಡವರ ಚಟುವಟಿಕೆಗಳಿಗೆ ಉಪದ್ರವಿಸಿದರೆ ಕಠಿನ ಶಿಕ್ಷೆ.
೧೪ ರಾಷ್ಟ್ರೀಯ ಸೈನ್ಯ.
೧೫ ಫ್ರಂಕೋ ಪಕ್ಷಕ್ಕೆ ಬೆಂಬಲವಿತ್ತರೆ ಅವರಿಗೆ ಉಚ್ಚ ಪದವಿ ಮತ್ತು ಬಹುಮಾನ.



ದಂಗೆಗಾರರ ಧುರೀಣ ಜನರಲ್ ಫ್ರೇಂಕೊ.



## ಆದರ್ಶ ಮೇದ್ರಿದ್!

ಸರಕಾರವು ತನ್ನ ಘಟನಾತ್ಮಕ ಹಕ್ಕನ್ನುಳಿಸಿಕೊಳ್ಳಲಿಕ್ಕಾಗಿ ಕೈಲಾ

ಅಂತರ್‌ರಾಷ್ಟ್ರೀಯ ಸೈನಿಕರು ಪ್ರಜಾಸತ್ತೆಗಾಗಿ ಯುದ್ಧ ರಂಗದಲ್ಲಿ ಪ್ರಾಣದಾನ ಮಾಡುತ್ತಿರುವುದು.

ಮೇದ್ರಿದ್ ನಗರವು ದಂಗೆಗಾರರ ಕೈವಶವಾಗಿ ಪ್ರಜಾಸತ್ತೆಯ ನಿರ್ನಾಮವಾಗಿ ಹೋಗುತ್ತಿತ್ತು. ಇಂದು ಸ್ಪೈನು ಸಾಮ್ರಾಜ್ಯಶಾಹೀ ಮನೋವೃತ್ತಿಯ ಜನರ ಆಧೀನದಲ್ಲಿರುತ್ತಿತ್ತು.



## ತಲೆಹೋಕರ ಅತ್ಯಾಚಾರ.

ದಂಗೆಗಾರರರು ನೀತಿನ್ಯಾಯ

# ಇಟೆಲಿ - ಜರ್ಮನಿಗಳ ಹಾರ್ದಿಕ ಬೆಂಬಲದಿಂದ ಜನರಲ್ ಫ್ರೇಂಕೊನಿಗೆ ವಿಜಯ!

ಕ್ಷಿಸಿದರು. ಸ್ಪೈನಿನ ವಾತಾವರಣದಲ್ಲಿ ಕಾರ್ಮೋಡಗಳು ಸುಳಿಯಲಾರಂಭಿಸಿದುವು. ಇತ್ತಂಡದವರೂ ಯುದ್ಧ ಸಿದ್ಧತೆಗಳನ್ನು ಭರದಿಂದ ಸಾಗಿಸಿದರು



## ಯುದ್ಧ! ಯುದ್ಧ!

ಸ್ಪಾನಿಷ್ ಜನರ ಅಭಿಪ್ರಾಯವನ್ನು ಲಕ್ಷಿಸದೆ ಸೈನಿಕ ಶಕ್ತಿಯನ್ನು ಪ್ರದರ್ಶಿಸಿ ವಿಜಯ ಪತಾಕೆಯನ್ನು ಮೇಲೇರಿಸುವ ಪ್ರಬಲಾಶೆಯಿಂದ **ಜನರಲ್ ಫ್ರೇಂಕೋ ತನ್ನ ಅಮಾನುಷೀ ನಾಟಕದಲ್ಲಿ ನಾಂದಿಯನ್ನು ಹಾಡಿಯಾಯಿತು.** ಒಂದೆರಡು ದಿನಗಳ ಯುದ್ಧದಲ್ಲೇ ಜನರಲ್ ಫ್ರೇಂಕೊನಿಗೆ ನುಂಗಲು ಸಾಧ್ಯವಾಗದಷ್ಟನ್ನು ಬಾಯೊಳಗೆ ತುರುಕಿಸಿಕೊಂಡೆನೆಂಬುದು ಸ್ಪಷ್ಟವಾಯಿತು. ಅನಿರೀಕ್ಷಿತ ಯುದ್ಧದಿಂದಾಗಿ ಸ್ಪೈನಿನ ಮಕ್ಕಳುಮರಿಗಳು ತಬ್ಬಿಬ್ಬಾದರು. ಆದರೇನು?



ದ ಯತ್ನವನ್ನು ಮಾಡಿತು. ಇದಕ್ಕಾಗಿ ಮೇದ್ರಿದ್ ನಗರದಲ್ಲಿ ನಡೆದ ಯುದ್ಧದಷ್ಟು ಭೀಕರ ನಿದರ್ಶನವು ಮತ್ತಾವುದೂ ಇಲ್ಲ. ಪ್ರಜಾಸತ್ತೆಯಲ್ಲಿ ನಂಬಿಕೆಯಿರುವ ಧೀರ ಜನರು ತಮ್ಮ ಅಸಾಮಾನ್ಯ ಶೌರ್ಯವನ್ನು ಈ ನಗರದಲ್ಲಿ ತೋರಿಸಿದರು. ಧನ ಸೈನ್ಯ ಸರಂಜಾಮಗಳ ಹೆಮ್ಮೆಯನ್ನು ಸಂಘಟಿತ ಶಕ್ತಿಯ ಅಮಿತ ಬಲದಿಂದ ಮುರಿದೊಗೆದು, ಸಾಮ್ರಾಜ್ಯಶಾಹಿಯ ಶುಷ್ಕ ಧ್ಯೇಯವನ್ನು ಜಗತ್ತಿನ ಜನರೆದುರು ಸಾರಲಿಕ್ಕಾಗಿ ಸ್ತ್ರೀಪುರುಷರು ದೇಹದ ಹಂಗುತೊರೆದು ಹೋರಾಡಿದ ಸ್ಥಳವಿದು. ಇಂಥ ಸಂಘಟಿತ ವಿರೋಧವನ್ನು ತೋರಿಸದಿದ್ದರೆ

ಬೋಂಬುಗಳಿಂದ ನುಚ್ಚುನೂರಾದ ಮನೆಯೊಂದರ ದೃಶ್ಯ.



ಗಳನ್ನು ಲೆಕ್ಕಿಸಲಿಲ್ಲ. ಸ್ವಾತಂತ್ರ್ಯದ ಕಹಳೆಯು ಕೇಳಿಸಿದೊಡನೆಯೇ ಹೆಚ್ಚಿನ ವೀರರು ತಮ್ಮ ಸತಿ ಪುತ್ರರನ್ನು ಮನೆಯಲ್ಲಿಯೇ ಬಿಟ್ಟು ತಾವು ಆರಿಸಿದ ಸರಕಾರದ ಕೀರ್ತಿಯನ್ನುಳಿಸುವುದಕ್ಕಾಗಿ ಯುದ್ಧರಂಗಕ್ಕೆ ತೆರಳಿದ್ದರು. ಈ ಕಾಲದಲ್ಲಿ ಸ್ಪೈನಿನಲ್ಲಿ ನಡೆದ ಅತ್ಯಾಚಾರವನ್ನು ಹೇಳಿತೀರದು. 'ನ್ಯೂಸ್ ಕ್ರಾನಿಕ್ಲ್' ಎಂಬ ಪತ್ರಿಕೆಯ ವಿಶೇಷ ಪ್ರತಿನಿಧಿಯು ದಂಗೆಗಾರ ಪಕ್ಷದ ಸೈನಿ

# ಸ್ಪೈನ್ ಸರಕಾರಕ್ಕೆ ಸೋವಿಯೆಟ್ ರಷ್ಯದ ಬೆಂಬಲ!

ಕರು ಮಾಡಿರುವ ಅತ್ಯಾಚಾರವನ್ನು ಹೀಗೆಂದು ವರ್ಣಿಸಿದ್ದಾನೆ.



## ಸ್ತ್ರೀಯರ ಮಾನಹಾನಿ.

'ಯುದ್ಧವೆಂದರೆ ಎಲ್ಲಾ ತರದ ಅತ್ಯಾಚಾರಗಳಿಗೆ ಕಾರಣವೆಂದು ಮೇದ್ರಿದಿನಲ್ಲಿ ನಾನು ಕಂಡ ದೃಶ್ಯವೇ ಸಾಕ್ಷಿಯಾಗಿದೆ. ಎಷ್ಟೋ ಕಡೆಗಳಲ್ಲಿ ನಾನು ನೋಡಿರುವ ದೃಶ್ಯಗಳು ತೀರಾ ಭಯಾನಕವಾಗಿವೆ. ತಲೆಹೋಕ ಸೈನಿಕರು ನಿರಪರಾಧೀ ಅಬಲೆಯರ ಮನೆಗಳನ್ನು ಪ್ರವೇಶಿಸಿ ಗುಂಡಿನ ಭಯ ಹುಟ್ಟಿಸಿ, ಬಹಳ ಕ್ರೂರ ರೀತಿಯಲ್ಲಿ ಹಟಸಂಭೋಗವನ್ನು ಮಾಡಿದ ಕರುಣಾಜನಕ ದೃಶ್ಯವನ್ನು ನಾನು ಕಂಡಿದ್ದೇನೆ. ಜನನಿಯರ ಸಂಕಟವನ್ನು ಕಂಡು ಮರುಗುವ ಮಕ್ಕಳನ್ನು ಕಣ್ಣಿನಲ್ಲಿ ರಕ್ತವಿಲ್ಲದೆ ನರಾಧಮರಂತೆ ಗುಂಡೆಸೆದು ಕೊಲ್ಲುವದನ್ನು ನಾನು ಕಂಡಿದ್ದೇನೆ.





ಭಾರತೀಯರಾದ ಡಾ. ಅಟಲರು ಇತರ ಗೆಳೆಯರೊಡನೆ ಯುದ್ಧರಂಗದಲ್ಲಿ ಗಾಯ ಹೊಂದಿದವರನ್ನು ಕೊಂಡೊಯ್ಯುವ ಏರ್ಪಾಡು

## ವೀರನಾರಿಯರು!

'ಮೇದ್ರಿದ್' ನಗರದ ಇನ್ನೊಂದೆಡೆಯಲ್ಲಿ ನಾಲ್ಕೈದು ಸೈನಿಕರು ಬಲಾತ್ಕಾರದಿಂದ ಒಂದುಮನೆಯನ್ನು ಪ್ರವೇಶಿಸಿದರು. ನಾನು ಸಮೀಪದಲ್ಲಿ ಹೋಗುತ್ತಿದ್ದೆ. ಗುಂಡಿನೇಟಿನ ಭಯವನ್ನು ಕೂಡಾ ಲೆಕ್ಕಿಸದೆ ಸೈನಿಕರು ಏನು ಮಾಡುವರೆಂಬುದನ್ನು ಎವೆಯಿಕ್ಕದೆ ನೋಡುತಿದ್ದೆ. ಸೈನಿಕರೆಲ್ಲರೂ ಕೂಡಿ ಬಾಗಿಲನ್ನು ಒಡೆದು ಒಳ ನುಗ್ಗಿದರು. ಹಲವು ತರುಣಿಯರು ಭಯದಿಂದ ಚೀರಿಕೊಳ್ಳುವ ಸ್ವರವು ಕೇಳಿಸಿತು. ನಾನು ಮನೆಯ ಸಮೀಪಕ್ಕೆ ತೆರಳಿದೆ. ತರುಣಿಯರಿಗೂ ಸೈನಿಕರಿಗೂ ಹೋರಾಟವಾಗುತ್ತಿತ್ತು. ಸಮೀಪದಲ್ಲಿಯೇ ಮುದುಕಿಯೊಬ್ಬಳು ಸ್ಮೃತಿ ತಪ್ಪಿಬಿದ್ದಿದ್ದಳು. ಧೀರ ತರುಣಿಯರು ತಮ್ಮ ಮಾನರಕ್ಷಣೆಗಾಗಿ ಸುಮಾರು ೫ ನಿಮಿಷಗಳ ತನಕ ಅಮಾನುಷೀ ಸೈನಿಕರೊಡನೆ ಹೋರಾಡಿದರು. ಒಬ್ಬಳ ಮೈಮೇಲಿನ ಬಟ್ಟೆಗಳು ಚೂರುಚೂರಾಗಿ ಆಕೆಯ ದೇಹವು ಬತ್ತಲೆಯಾಗಿ ಕಾಣಿಸುತ್ತಿತ್ತು. ಕೆಲವೆಡೆಗಳಲ್ಲಿ ರಕ್ತವು ಸುರಿಯುತ್ತಿತ್ತು. ಇನ್ನೊಬ್ಬನು ತನ್ನ ರೈಫಲನ್ನು ಒಬ್ಬಳ ಎದೆಗೆ ತೋರಿಸಿ ಆಕೆಯ ವಸನವನ್ನು ಬಿಚ್ಚಿಸುತ್ತಿದ್ದನು. ಮತ್ತೊಬ್ಬ ಸೈನಿಕನು ನಿಭಾ[illegible]



ಬ್ರಿಟಿಷ್ ಗೌರವದೊಡನೆ ಭೂಮಧ್ಯ ಸಮುದ್ರದಲ್ಲಿ ಬ್ರಿಟಿಷ್ ಹಡಗವೊಂದು ಮುಳುಗುತ್ತಿದೆ!

ತರುಣಿಯ ಮಾನಾಪಹಾರ ಮಾಡುತ್ತಿದ್ದನು. ನಾನು ಕಂಡ ಆ ಕರುಣಾಜನಕ ದೃಶ್ಯವನ್ನು ಪೂರ್ಣವಾಗಿ ವಿವರಿಸಿದರೆ ಬರೆಯುವ ನೀತಿಯ ಮೇರೆಯನ್ನು ಮೀರಬೇಕಾಗುತ್ತದೆ”

# ಬ್ರಿಟಿಷರ ಲಜ್ಜಾವಹ ತಾಟಸ್ಥ್ಯ ಧೋರಣೆ.

## ರಿಪಬ್ಲಿಕಿನ ವಿಜಯ!

ಮೇದ್ರಿದ್ ನಗರದಲ್ಲಿ ಪ್ರಚಂಡ ಯುದ್ಧವಾಯಿತು. ಯುದ್ಧ ಸಾಧನಗಳಿಲ್ಲದ ಜನರು ತಂಡ ತಂಡವಾಗಿ ಬಂದರು. ದಂಗೆಗಾರರು ಮೊಂಟಾನಾದಲ್ಲಿ ದೊಡ್ಡ ಗೋಡೆಯನ್ನು ಕಟ್ಟಿದ್ದರು. ನೂರಾರು ಜನರು ನಿರಾಯುಧರಾಗಿ ದಂಗೆಗಾರರ ಗುಂಡುಗಳಿಗೆ ತಮ್ಮೆದೆಯನ್ನು ಕೊಟ್ಟರು. ಒಂದರ ಬಳಿಕೊಂದು ತಂಡವು ಸಮುದ್ರದಲೆಗಳಂತೆ ಬಂದು ದಂಗೆಗಾರರ ಸೈನ್ಯ ಸರಂಜಾಮುಗಳ ಗೋಡೆಯನ್ನು ತಮ್ಮ ಬರಿಗೈಯ್ಯಲ್ಲೇ ನುಚ್ಚು ನೂರುಮಾಡಿದರು. ಮೇದ್ರಿದಿನಲ್ಲಿ ರಿಪಬ್ಲಿಕಿನ ಧ್ವಜದ ಗೌರವವನ್ನು ಜನರು ರಕ್ಷಿಸಿಕೊಂಡರು.

## ಬರ್ಗೋಸ್ ಸರಕಾರ

ಕೆಲವೇ ದಿನಗಳಲ್ಲಿ ಜನರಲ್ ಫ್ರೇಂಕೊ ದಂಗೆಗಾರರ ತಾತ್ಕಾಲಿಕ ಸರಕಾರವೊಂದನ್ನು ಬರ್ಗೋಸ್ ಎಂಬಲ್ಲಿ ಸ್ಥಾಪಿಸಿದನು. ರಾಜಧಾನಿಯ ಮೇಲೆ ಧಾಳಿಡುವುದಕ್ಕಾಗಿ ಜನರಲ್ ಮೋಲಾ ಎಂಬವನನ್ನು ದಕ್ಷಿಣಾಭಿಮುಖವಾಗಿ ದಂಗೆಗಾರರು ಕಳುಹಿಸಿದರು. ಗ್ವಾಡರಾಮಾ ಪರ್ವತದಲ್ಲಿ ಸೈನಿಕ ಶಿಕ್ಷಣದ ಗಂಧಗಾಳಿಯಿಲ್ಲದ, ಶಿಸ್ತಿನ ಅರಿವೇ ಇಲ್ಲದ ಸಾಮಾನ್ಯ ಜನರು ಅರಿತು ನುರಿತ ಜನರಲ್ ಮೋಲನ ಸೈನಿಕರನ್ನು ತಡೆದರು. ಸೈನಿಕ ಶಕ್ತಿಗಿಂತಲೂ ರಾಷ್ಟ್ರಪ್ರೇಮವು ಮಹತ್ವವಾದುದೆಂಬುದನ್ನು ಅವರು ತೋರಿಸಿಕೊಟ್ಟರು.



ಸ್ಪೇನಿಷ್ ಯುದ್ಧರಂಗದಿಂದ ಇತ್ತೀಚೆಗಿನ ತಾಟಸ್ಥ್ಯ ನಿರ್ಣಯದಿಂದಾಗಿ ಹಿಂದೆ ಬರುತ್ತಿರುವ ಇಟಾಲಿಯನ್ ಸೈನಿಕರು. ಇವರೊಡನೆ ಹೋದ ೨೦೦೦ ಮಂದಿ ಸೈನಿಕರು ಯುದ್ಧ ದೇವತೆಗೆ ಬಲಿಯಾದರು.

## ಸರಕಾರೀ ಸೈನ್ಯ!

ಸರಕಾರೀಸೈನ್ಯವು ಸ್ಥಾಪನೆಯಾಗುವ ಮೊದಲು ಸ್ಪೈನಿನ ರಾಷ್ಟ್ರೀಯ ಸ್ವಯಂಸೇವಕರು ಎಷ್ಟೊಂದು ಧೀರತೆಯಿಂದ ಹೋರಾಡಿದರೆಂಬುದನ್ನು ಹೇಳಲು ಸ್ಥಳಾಭಾವದಿಂದ ಶಕ್ಯವಲ್ಲ. ಶತ್ರುಗಳ ಆಧುನಿಕ ಯುದ್ಧ ಸಾಧನಗಳನ್ನು ಅವರು ಹಸಿವೆಯಿಂದ ಬಳಲುತ್ತಿರುವಾಗ, ಅವ್ಯವಸ್ಥಿತರಾಗಿದ್ದಾಗ, ಎದುರಿಸಿದರು. ಜನರಲ್ ಮೋಲನು ನಿರಪರಾಧೀ ಜನರನ್ನು ಸ್ಪೈನಿನ ನಗರದ ಬೀದಿಗಳಲ್ಲಿ ಗುಂಡೆಸೆದು ಕೊಲ್ಲಿಸುತ್ತಿರುವುದನ್ನು ಕೂಡಾ ಅವರೆದುರಿಸಿದರು.

## ಭೀಕರ ಅಂತಃಕಲಹ.

ಸಾಮಾನ್ಯ ಯುದ್ಧಗಳಿಗಿಂತ ಅಂತಃಕಲಹಗಳು ಅತ್ಯಂತ ಭೀಕರವಾದುವುಗಳೆಂಬುದಕ್ಕೆ ಸ್ಪೈನೇ ನಿದರ್ಶನವಾಗಿದೆ. ಇತ್ತಂಡದವರೂ ಸಾಮಾನ್ಯ ಮಟ್ಟಿಗೆ ಭೀಕರ ಅತ್ಯಾಚಾರಗಳನ್ನು ಮಾಡಿದ್ದಾರೆ. ದಾರಿದ್ರ್ಯಕ್ಕೆ ತುತ್ತಾಗಿ, ನರಳುತ್ತಿದ್ದ ಬಡಜನರಿಗೆ ಮಧುರ ಆಶ್ವಾಸನಗಳನ್ನಿತ್ತು ಅವರ ಸರಕಾರಕ್ಕೆ ವಿರೋಧವಾಗಿ ಹೋರಾಡುತ್ತಿರುವ ಧನಿಕರ ದರ್ಪವನ್ನು ದಂಗು ಬಡಿಯುವುದಕ್ಕಾಗಿ ಜನರು ತಮ್ಮ ಕೈ

ಲಾದ ಬೆಂಬಲವನ್ನು ಸರಕಾರಕ್ಕೆ ಯತ್ನಿಸಿದರು.

# ಜನರಲ್ ಫ್ರೇಂಕನ ಅಮಾನುಷೀ ಅತ್ಯಾಚಾರ.

## ಇಗರ್ಜಿಗಳ ಕುಹಕತನ!

ಯಾವ ಧಾರ್ಮಿಕ ಸಂಸ್ಥೆಗಳಾದ ಇಗರ್ಜಿಗಳು ಧನಿಕರ ರಾಗಕ್ಕೆ ತಾಳಹಾಕಿ, ಬಡಜನರು ಬೆವರು ಸುರಿಸಿ ದುಡಿದ ಹಣವನ್ನು ಸಂಗ್ರಹಿಸಿ ಭವ್ಯವಾದ ದೇವಾಲಯಗಳನ್ನು ಕಟ್ಟಿಸಿ ಅಂಧ ಶ್ರದ್ಧೆಯ ಇರುಳಲ್ಲಿ ಬಡಜನರನ್ನಿರಿಸಿ, ಶತಮಾನಗಳಿಂದ ಸುಖವಾಗಿ ಉಂಡುಟ್ಟು ಮೆರೆಯುತ್ತಿದ್ದವೋ ಅಲ್ಲಿಯ ಪಾದ್ರಿಗಳು ದಂಗೆಗಾರರಿಗೆ ಬೆಂಬಲವೀಯುತ್ತಿರುವುದನ್ನು ಕಂಡು ಅವರ ಕೋಪವು ಮತ್ತಷ್ಟು ಹೆಚ್ಚಿತು. ದೇವರ ಹೆಸರಿನಲ್ಲಿ ಅನಾಚಾರಗಳನ್ನು ರಹಸ್ಯದಲ್ಲಿ ಮಾಡುತ್ತಿದ್ದ ಎಷ್ಟೋ ಪಾದ್ರಿಗಳ ಶಿರಚ್ಛೇದನವಾಯಿತು. ತರುಣಿಯರನ್ನು ಯುದ್ಧ ಕಾಲಗಳಲ್ಲಿ ಇಗರ್ಜಿಗಳಲ್ಲಿರಲು ಎಡೆಗೊಟ್ಟು ಬಾಂಬುಗಳಿಂದ ಅವರನ್ನು ರಕ್ಷಿಸುವ ಆಶ್ವಾಸನೆಯನ್ನಿತ್ತು ತಮ್ಮ ಕಾಮಸಾಧನಗಳನ್ನಾಗಿ ಉಪಯೋಗಿಸುತ್ತಿದ್ದ ಕುರು ಕುನ್ನಿಗಳಾದ ಅದೆಷ್ಟೋ ಧಾರ್ಮಿಕ ಐಂದ್ರಜಾಲಿಕರನ್ನು ಯುವಕರು ಈ ಗೊಂದಲದಲ್ಲಿ ನೆಲಸಮಗೊಳಿಸಿದರು. ಆದರೆ ಸರಕಾರವು ಈ ಅವ್ಯವಸ್ಥೆಯನ್ನು ಬಹಳ ಪರಿಶ್ರಮದಿಂದ ಹತೋಟಿಗೆ ತಂದಿತು. ಶಿಸ್ತಿನ ಬೆಳಕು ಅವ್ಯವಸ್ಥೆಯ ಅಂಧಕಾರವನ್ನು ಹೊಡೆದೋಡಿಸಿತು.



ನಾಗರಿಕರು ಫ್ರೇಂಕೊನ ಬೋಂಬುಗಳಿಂದಾಗಿ ನಾಯಿಗಳಂತೆ ಬೀದಿಗಳಲ್ಲಿ ಸಾಯುತ್ತಿರುವ ಒಂದು ಕರುಣಾಜನಕ ದೃಶ್ಯ.

## ತಾಟಸ್ಥ್ಯ ಧೋರಣೆಯ ಶುಷ್ಕತೆ

ಸ್ಪೈನಿನ ಸರೋವರದಲ್ಲಿ ಉಂಟಾಗಿರುವ ಅಪೂರ್ವ ಅಂತಃಕಲಹದ ತುಫಾನಿನಲ್ಲಿ ಗಾಳ ಹಾಕಲು ಆಗಲೇ ಹಲವಾರು ವಿದೇಶೀ ರಾಷ್ಟ್ರಗಳು ಪ್ರಾರಂಭಿಸಿದುವು. ಪ್ರಜಾಸತ್ತೆಗಳ ಸೋಗಿನಲ್ಲಿರುವ ಹಲವು ರಾಷ್ಟ್ರಗಳು ಸ್ಪೈನ್ ಸರಕಾರಕ್ಕೆ ಯುದ್ಧ ಸಾಧನಗಳನ್ನು ಕೊಂಡುಕೊಳ್ಳುವ ಹಕ್ಕನ್ನು ಕೊಡದೆ ಮಹಾ ಮೋಸ ಮಾಡಿದವು. ಗೊಂದಲವುಂಟಾಗಿ ಒಂದು ವಾರವಾಗುವ ಮೊದಲೇ ಇಟೆಲಿಯ ವಿಮಾನವೊಂದು ಅಲ್ಜೀರಿಯಾ ಎಂಬಲ್ಲಿ ಸಿಕ್ಕಿ ಹೊಡೆಯಿತು.

## ಇಟೆಲಿಯ ಪ್ರತ್ಯಕ್ಷ ಬೆಂಬಲ

ಫ್ಯಾಸಿಸ್ಟ ತತ್ವಾನುಯಾಯಿ ಸೀನರ್ ಮುಸ್ಸೋಲಿನಿಯು ಸ್ಪೈನಿಗೆ ತನ್ನ ವಿಮಾನದಳವನ್ನು ಕಳುಹಿಸಿ ದಂಗೆಗಾರರಿಗೆ ಬೇಕಾದ ಬೆಂಬಲವನ್ನು ಕೊಡುತ್ತಿದ್ದನು. ಇಟಾಲಿಯನ್ ಸರಕಾರವು ಒಪ್ಪಿಕೊಂಡಿರುವಂತೆ ೧೯೦,೨೦೦ ಬಾರಿ ಸ್ಪೈನಿನಲ್ಲಿ ಗುಂಡೆಸೆದು ಸರಕಾರೀ ಪಕ್ಷದ ೫೮೦ ವಿಮಾನಗಳನ್ನು ನೆಲಕ್ಕುಳಿಸಿನೆಯಂತೆ. ನಿಜವಾಗಿಯೂ ಇಟೆಲಿಯ ಎಷ್ಟು ಸೈನ್ಯಸರಂಜಾಮುಗಳು ಸ್ಪೈನಿನಲ್ಲಿಹೋರಾಡಿವೆಯೆಂಬುದು ತಿಳಿದಿಲ್ಲ.

## ಎರಡು ರಣಹದ್ದುಗಳು!

ಯುರೋಪಿನ ಎರಡು ರಣಹದ್ದುಗಳು ತಮ್ಮ ಗೃಧ್ರ ದೃಷ್ಟಿಯನ್ನು ಸ್ಪೈನಿನ ಮೇಲೆ ಬೀರಿದ್ದುವು. ಜರ್ಮನಿ ಮತ್ತು ಇಟೆಲಿಗಳಿಂದ ಯುದ್ಧ ಸಾಧನ ಮತ್ತು ಸೈನಿಕರನ್ನು ತುಂಬಿದ ಹಡಗುಗಳು ಸ್ಪೈನಿಗೆ ಹೊರಟವು. ತಾಟಸ್ಥ್ಯ ಧೋರಣೆಗೆ ಮುಸ್ಸೋಲಿನಿ ಒಪ್ಪಿದರೂ ಪ್ರತಕ್ಷ ಬೆಂಬಲವು ಮಾತ್ರ ಸ್ಪೈನಿನ ದಂಗೆಗಾರರಿಗೆ ಕೊಡಲ್ಪಡುತ್ತಿತ್ತು. ಅಮೇರಿಕದಿಂದ ಯುದ್ಧ ಸಾಧನಗಳನ್ನು ಕೊಂಡುಕೊಳ್ಳಲು ಸಾಧ್ಯವಾಗದಿದ್ದರೂ, ಸರಕಾರೀ

(೩೯ನೆ ಪುಟ ನೋಡಿ.)

# ಪ್ಯಾರಿಸಿನ ಪಾಪ ಕೂಪಗಳು.

## ಜಗತ್ತಿನ 'ವಿಲಾಸ ನಗರ'ದ ವಿವಿಧ ರಹಸ್ಯಗಳು!

- ಅಂತರ್ - ರಾಷ್ಟ್ರೀಯ ಸ್ತ್ರೀ ವ್ಯಾಪಾರಿಗಳು.
- ಬೋಂಬಿನ ಭಯದಿಂದ ತಮ್ಮನ್ನೇ ಮಾರಿಕೊಂಡ ನಿರ್ಭಾಗ್ಯತರುಣಿಯರು.
- ನಿಶಾಮಂದಿರಗಳಲ್ಲಿ ಮದಿರೆಯ ಹಬ್ಬ.
- ಇಗರ್ಜಿಗಳೆದುರು ನಗ್ನ ಚಿತ್ರವಿಕ್ರಯ.



- ಫ್ರಾನ್ಸಿನಲ್ಲಿ ಸರಕಾರದಿಂದ ಅಧಿಕಾರ ಹೊಂದಿದ ವ್ಯಭಿಚಾರ ಗೃಹಗಳು.
- ಇಂಗ್ಲೆಂಡ್ ಅಮೇರಿಕಗಳಲ್ಲಿ ಮುದ್ರಣವಾದ ಪ್ಯಾರಿಸ್ ಪತ್ರಿಕೆಗಳು.
- ಪ್ಯಾರಿಸ್ ನಗರದ ಮಹತ್ವದ ಕೈಗಾರಿಕೆಯ ರಹಸ್ಯ.
- ಜಗತ್ತಿನ ಭಯಾನಕ ನಗರ!

**ಪ್ಯಾರಿಸ್!** ಎಂದೊಡನೆಯೇ ವಿಲಾಸೀ ಜೀವನದ ನೆನಪು ಹೆಚ್ಚಿನವರಿಗಾಗಬಹುದು. ಪಂಡಿತ ಮೋತೀಲಾಲ್ ನೆಹರುರವರು ತಮ್ಮ ವೈಭವದ ಕಾಲದಲ್ಲಿ ಬಟ್ಟೆಬರೆಗಳನ್ನು ಪ್ಯಾರಿಸಿನಲ್ಲಿ ಮಡಿ ಮಾಡಿಸುತ್ತಿದ್ದರೆಂದು ಜನರು ಹೇಳುತ್ತಿದ್ದರು. ಇದನ್ನು ಜವಾಹರಲಾಲರು ಸುಳ್ಳೆಂದು ಹೇಳಿರುವುದಿದ್ದರೂ, ಜಗತ್ತು ಪ್ಯಾರಿಸ್ ನಗರವನ್ನು ವಿಲಾಸದ ತವರೂರೆಂದು ಭಾವಿಸುತ್ತಿದೆಯೆಂಬುದರಲ್ಲಿ ಸಂಶಯವಿಲ್ಲ.

> ಪ್ಯಾರಿಸಿನ ಕ್ಯಾಬರೆಟ್‌ಗಳಲ್ಲಿ ನಡೆಯುವ ಪಾಪಕೃತ್ಯಗಳಲ್ಲಿ ಭಾಗವಹಿಸುವವರಲ್ಲೊಬ್ಬಳು.

### ವಿಲಾಸಿಗಳ ತವರೂರು!

ಪ್ಯಾರಿಸ್ ನಗರಕ್ಕೆ ಜಗತ್ತಿನ ವಿವಿಧ ಪ್ರಾಂತ್ಯಗಳಿಂದ ಪ್ರತಿವರುಷ ಲಕ್ಷಗಟ್ಟಲೆ ಜನರು ಸಂಚಾರಕ್ಕಾಗಿ ಹೋಗುತ್ತಾರೆ. ಪ್ಯಾರಿಸಿನ ವೇಷಭೂಷಣಗಳ ಕ್ರಮವು ಪಾಶ್ಚಾತ್ಯರಿಗೊಂದು ಮಾದರಿಯಾಗಿ ಪರಿಣಮಿಸಿದೆ. ಪ್ಯಾರಿಸೇ ಫ್ಯಾಶನಿನ ತವರೂರೆಂದು ಹೆಚ್ಚಿನ ತರುಣಿಯರ ಭಾವನೆಯಾಗಿದೆ. ಈ ನಗರಕ್ಕೆ ಅಮೇರಿಕದ ಮಿಲಿಯಾಧಿಪತಿಗಳು ಅಧಿಕವಾಗಿ ಹೋಗಿ ತಮ್ಮ ಹೆಚ್ಚಿನ ಸಮಯವನ್ನು ಅಲ್ಲಿಯೇ ಕಳೆಯುತ್ತಿರುವರೆಂದು ಯುನ್ಯಾಟೆಡ್ ಸ್ಟೇಟ್ಸಿನ 'ಫ್ಯಾಶನ್' ಎಂಬೊಂದು ಪತ್ರಿಕೆಯು ಹೇಳುತ್ತಿದೆ. ಈಗ ಲೋಕಸಂಚಾರ ಮಾಡುತ್ತಿರುವ ಪತ್ರಿಕೋದ್ಯಮಿಗಳಾದ ಖ್ವಾಜಾ ಅಹಮ್ಮದ್ ಅಬ್ಬಾಸ್ ಎಂಬ ಭಾರತೀಯರು ಪ್ಯಾರಿಸ್ ನಗರದ ಕುರಿತು ಬರೆಯುತ್ತಾ ಹಲವು ರಹಸ್ಯಗಳನ್ನು ಹೇಳಿದ್ದಾರೆ.

### ದೇಹವಿಕ್ರಯದ ಬೀಡು!

"ಫ್ರಾನ್ಸಿನ ಜನರು ಬಹಳ ಪರಿ-

ಶ್ರಮಿಗಳು. ಅವರಿಗೆ ವಿಲಾಸದಲ್ಲಿ ವಿಶೇಷ ಅಭಿರುಚಿಯಿಲ್ಲ. ಹೆಚ್ಚಿನ ಫ್ರೆಂಚರು ರಾಜಕಾರಣದಲ್ಲಿ ಮಾತ್ರ ಅಭಿರುಚಿಯುಳ್ಳವರಾಗಿದ್ದಾರೆ" ಎಂದವರು ಹೇಳಿದ್ದಾರೆ. ಆದರೆ ಪ್ಯಾರಿಸ್ ನಗರವನ್ನು ವಿಲಾಸಿಗಳ ತವರೂರನ್ನಾಗಿ ಮಾಡಿದ ಕೀರ್ತಿಯು ಪರದೇಶೀಯರಿಗೆ ಸಲ್ಲುತ್ತದೆ. ಜಗತ್ತಿನ ಎಲ್ಲಾ ಭಾಗಗಳಿಂದ ಜನರು ಸಂಚಾರಾರ್ಥವಾಗಿ ಪ್ಯಾರಿಸಿಗೆ ಹೋಗುತ್ತಿರುವುದನ್ನು ನೋಡಿ ಚತುರ ವರ್ತಕರು ಮಿಲಿಯಾಧಿಪತಿಗಳಿಂದ ಹಣ ಸುಲಿಯುವುದಕ್ಕಾಗಿ ಕೆಲವು ಹಂಚಿಕೆಗಳನ್ನು ಮಾಡಿದರು. ಫ್ರಾನ್ಸಿನಲ್ಲಿ ಎಷ್ಟೋ ವಿದೇಶೀಯರು ಗತಿಗೋತ್ರವಿಲ್ಲದ ಬಡ ತರುಣಿಯರನ್ನು ತಂದು ದೇಹ ವಿಕ್ರಯ ಮಾಡಲಾರಂಭಿಸಿದರು.

## ನಗ್ನ ಚಿತ್ರಗಳ ಪತ್ರಿಕೆಗಳು

ಅರೆಬತ್ತಲೆ ತರುಣಿಯರು ತಮ್ಮ ನಗ್ನದೇಹ ಸೌಂದರ್ಯವನ್ನು ತೋರಿಸುವ ಪತ್ರಿಕೆಗಳು ಹೆಚ್ಚಾಗಿ ಪ್ಯಾರಿಸಿನಿಂದಲೇ ಬರುತ್ತವೆಯೆಂದು ಹೆಚ್ಚಿನವರ ಊಹೆಯಾಗಿರಬಹುದು. ಆದರೆ ಇದು ಪೂರ್ಣ ನಿರಾಧಾರವಾಗಿದೆ. ಅಲ್ಲಿಯ ಕೆಲವು ಪತ್ರಿಕೆಗಳು ಎಲ್ಲಿ ಮುದ್ರಿಸಲ್ಪಟ್ಟಿವೆಯೆಂಬುದನ್ನು ನೋಡಿದರೆ ಅವುಗಳಲ್ಲಿ ಹೆಚ್ಚಿನವು ನ್ಯೂಯಾರ್ಕ್ ಅಥವಾ ಲಂಡನಿನಲ್ಲಿ ತಯಾರಾದುವುಗಳು. ಅವುಗಳ ಹೆಚ್ಚಿನ ಬತ್ತಲೆ ಚಿತ್ರಗಳು ವಿದೇಶಗಳ ಸ್ತ್ರೀಯರದು.

## ಮುದುಕರಿಗೂ ಹುಚ್ಚು.

ಈ ಪತ್ರಿಕೆಗಳನ್ನು ಯುವಕರು ಮುದುಕರೆನ್ನದೆ ಹೆಚ್ಚಿನವರು ತರಿಸಿ ನೋಡುತ್ತಾರೆ. ಇತ್ತೀಚೆಗೆ ಒಂದು ಪತ್ರಿಕೆಯಲ್ಲಿ ಪ್ರಕಟವಾಗಿರುವಂತೆ ನಗ್ನ ಚಿತ್ರಗಳನ್ನು ನೋಡುವುದರಲ್ಲಿ ಮುದುಕರಿಗಿದ್ದಷ್ಟು ಆಸಕ್ತಿಯು ಯುವಕರಿಗೆ ಕೂಡಾ ಇರುವುದಿಲ್ಲ. ಪ್ರಾಯ ಸಂದವರಿಗೆ ಭೋಗಾದಿ ಸುಖಗಳ ಪೂರ್ಣ ಅನುಭವವಿರುವುದರಿಂದ ಅವರು ಅಂತಹ ಹಾನಿಕಾರಕ ಚಿತ್ರಗಳನ್ನು ಕಂಡು, ಕಳೆದು



ನೋಡುವವರ ಮನಸೆಳೆಯುವ ಮಾಟಗಾತಿಯೊಬ್ಬಳು.

ಹೋದ ತಾರುಣ್ಯದ ಸವಿಗನಸುಗಳನ್ನು ಕಂಡು ಆನಂದಪಡುವುದಿದೆಯಂತೆ.

## ಪ್ಯಾರಿಸಿನ ಪಾಪಕೂಪಗಳು.

ಪ್ಯಾರಿಸಿನ ಪಾಪಕೂಪಗಳ ಕುರಿತು ಇದೊಂದೇ ಲೇಖನದಲ್ಲಿ ಬರೆದು ವಿವರಿಸುವುದು ಸುಲಭಸಾಧ್ಯವಲ್ಲದಿರುವುದರಿಂದ ಕೆಲವು ಲೇಖನಾಂಕಗಳಲ್ಲಿ ವಿವರಿಸಬೇಕೆಂದಿದ್ದೇನೆ. ಈ ಲೇಖನಾಂಕದಲ್ಲಿ ವಿದೇಶೀಯರು ಪರದೇಶಗಳಿಂದ ಬಂದು ಜನತೆಯ ನೀತಿ ನಿಯಮಗಳನ್ನು ಕೆಡಿಸುವ ವ್ಯಭಿಚಾರಗೃಹಗಳನ್ನು ಸ್ಥಾಪಿಸಿ ಹೇಗೆ ತಮ್ಮ ದುಷ್ಕಾರ್ಯವನ್ನು ಯಶಸ್ವಿಯಾಗಿ ನಡೆಸುತ್ತಿರುವರೆಂದು ಸಂಕ್ಷಿಪ್ತವಾಗಿ ಬರೆಯುತ್ತೇನೆ.

## ಆನಂದದ ಬೀಡು!

ವಿದೇಶೀ ಸಂಚಾರಿಗಳಿಗೆ ಪ್ಯಾರಿಸೆಂದರೆ ದೊಡ್ಡ ಆನಂದದ ಬೀಡೆಂದು ಮೊದಲೇ ಹೇಳಿದ್ದೇನೆ. ಅಮೇರಿಕದ ಇಂಗ್ಲೆಂಡಿನ ಮತ್ತು ಇನ್ನಿತರ ಹಲವು ದೇಶಗಳ ಜನರು ಅಲ್ಲಿಯ ಕೋಟೆ ಕೊತ್ತಳಗಳನ್ನೋ ಚಾರಿತ್ರಿಕ ಸ್ಥಳಗಳನ್ನೋ ನೋಡಲು ಹೋಗುವುದಲ್ಲ. ಅಲ್ಲಿಯ ಉದ್ಯಾನವನಗಳು, ಅಲ್ಲಿಯ ನದಿಗಳು, ಅಲ್ಲಿಯ ಕಲಾಮಂದಿರವಾದ "ಮೋನಾ ಲಿಸಾ" ಇವಾವುದೂ ಅವರಿಗೆ ಬೇಕಾಗಿಲ್ಲ. ಫ್ರೆಂಚ್ ನಿವಾಸಿಗಳು ಸ್ವಾಭಾವಿಕವಾಗಿ ಒಳ್ಳೆಯ ಜನರಾದುದರಿಂದ ಎಲ್ಲಾ ಮನೋವೃತ್ತಿಯವರಿಗೆ ಅಲ್ಲಿ ಎಡೆ ದೊರಕುವುದರಿಂದ ಪ್ಯಾರಿಸಿನಲ್ಲಿ ಈಗಿರುವಷ್ಟು ಅಸಂಖ್ಯಾತ ಪಾಪಕೂಪಗಳು ತಲೆದೋರಲು ಸಾಧ್ಯವಾಯಿತು. ಫ್ರೆಂಚ್ ಜನರಿಗೆ ಮಹಾಕ್ರಾಂತಿಯ ಬಳಿಕ ಇತರರ ಮೇಲೆ ಅದೊಂದು ತರದ ಸಹಾನುಭೂತಿ ಮತ್ತು ಪ್ರೇಮವು ಉಂಟಾಗಿದೆ. ಇವೆಲ್ಲಾ ಸವಲತ್ತುಗಳನ್ನು ಉಪಯೋಗಿಸಿ ಬೇಕಾದಷ್ಟು ಹಣವನ್ನು ಸುಲಿಗೆ ಮಾಡುವ ದೌರ್ಭಾಗ್ಯವು ಮಾತ್ರ ವಿದೇಶೀ ಜನರದಾಗಿದೆ.

ಆ ಪ್ಯಾರಿಸ್!

ವಿಹಾರಾರ್ಥವಾಗಿ ಪ್ಯಾರಿಸಿಗೆ ಹೋಗುವವನೊಡನೆ "ಏಕೆ ಹೋಗುವುದು?" ಎಂದು ನೀವು ಕೇಳುವುದೇ ತಡ. ಇಳಿದ ಸ್ವರದಲ್ಲಿ ಅವನು ಮಾತಾಡತೊಡಗುತ್ತಾನೆ. ಅವನ ಮುಖದಲ್ಲಿ ಹೊಸ ಬಗೆಯ ಒಂದು ಉತ್ಸಾಹವು ಎಚ್ಚೆತ್ತು ಕಾಣುತ್ತದೆ. ತುಟಿಯಲ್ಲಿ ಗಣನೀಯವಾದೊಂದು ಅರೆನಗೆಯು ಹೊರಸೂಸುತ್ತದೆ. ಪ್ಯಾರಿಸೆಂದರೆ ಅಂಥವರಿಗೊಂದು ಮೋಹದ ಬೀಡು. ಅಲ್ಲಿಯ ಸ್ತ್ರೀಯರ ನಗ್ನ ನೃತ್ಯ, ಅಲ್ಲಿಯ ವಿರೂಪ ಸಂಭೋಗ ರೀತಿ, ಅಲ್ಲಿಯ ನಿಶಾ ಮಂದಿರಗಳು, ಅಲ್ಲಿಯ ಹೊಟೆಲು, ವ್ಯಭಿಚಾರ ಗೃಹ ಇವೆಲ್ಲವೂ ಒಮ್ಮೆ ಕಣ್ಣ ಮುಂದೆ ಬರುತ್ತವೆ. ಲಂಡನ್ ನ್ಯೂಯಾರ್ಕಿನ ಚತುರ ವರ್ತಕರು ಮುದ್ರಿಸಿ ಮಾರುವ ಪುಸ್ತಕಗಳಲ್ಲಿ ಕಂಡ ಆ ಚಿತ್ರಗಳ ಮೋಹಕತೆಯು ಅವರ ಕಣ್ಣುಗಳಲ್ಲಿ ಹೊಳೆಯುತ್ತದೆ. ಇಂಥವರು ಸುಖಾನ್ವೇಷಣೆಯಲ್ಲಿ ಪ್ಯಾರಿಸಿಗೆ ಬರುತ್ತಾರೆಂದೇ ಅನೇಕ ಮಂದಿ ಪ್ಯಾರಿಸಿನಲ್ಲಿ ವ್ಯಭಿಚಾರ ಮಂದಿರಗಳನ್ನು ಕಟ್ಟಿದ್ದಾರೆ. ಈ ಮಂದಿರಗಳಲ್ಲಿ ದೊರಕದಿರುವ ಭೋಗಸಾಧನಗಳೇ ಇಲ್ಲ. ಹಣದಾಸೆಗಾಗಿ ಅಲ್ಲಿರುವ ವ್ಯಭಿಚಾರಿಣಿಯರು ಎಂತಹ ಸುಖವನ್ನಾದರೂ ಕೊಡಲು ಸಿದ್ಧರಾಗಿದ್ದಾರೆ. ಪ್ಯಾರಿಸನ್ನು ನೋಡಲಿಕ್ಕೆಂದು ಹೋಗುವ ಹೆಚ್ಚಿನವರು ಈ ಭಯಾನಕ ಕೇಂದ್ರಗಳನ್ನು ಸಂದರ್ಶಿಸಿ, ತಮ್ಮ ಜೇಬಿನ ಹಣವನ್ನು ವ್ಯಯಿಸಿ, ಕೆಲವೊಮ್ಮೆ ಭಯಂಕರ ರೋಗಗಳನ್ನು ಸಂಪಾದಿಸಿಕೊಂಡು ಹಿಂತಿರಳುವುದುಂಟು. ಇಂತಹ ಜನರ ಪ್ರಚಾರದಿಂದಾಗಿಯೇ ಪ್ಯಾರಿಸ್ ವಿಲಾಸ ನಗರವಾಗಿದೆ. ಇಂತಹ ವ್ಯಕ್ತಿಗಳಿಂದಾಗಿಯೇ ಇಂದು ಪ್ಯಾರಿಸ್ ನಗರವು ಜಗತ್ತಿನ ಅತ್ಯಂತ ಹೇಯ ಪಾಪಕೂಪಗಳಲ್ಲೊಂದಾಗಿದೆ. ಜಗತ್ತಿನಲ್ಲಿರುವ ಎಲ್ಲಾ ವಿಧದ ವಿಚಿತ್ರ ಹೇಯ ಸುಖಗಳನ್ನು ಈನಗರವುಒದಗಿಸುತ್ತಿದೆಯೆಂಬುದು ಸತ್ಯವಾಗಿದೆ. ಆದರೆ ಫ್ರೆಂಚ್ ಜನರು



ಕೇವಲ ಕಣ್ಸನ್ನೆಯಿಂದಲೇ ಮರುಳುಗೊಳಿಸುವ ಮುಗ್ಧೆ.

ಇವುಗಳನ್ನು ಸಮರ್ಥಿಸುವರೆಂದು ಎಣಿಸಬಾರದು. ಇಂತಹ ಹೇಯ ವೃತ್ತಿಗೆ ಪೂರ್ಣಬೆಂಬಲವನ್ನೀಯುವವರೆಂದರೆ ವಿದೇಶೀಯರು. ಅಮೇರಿಕದ ಮಿಲಿಯಾಧಿಪತಿಗಳ ಹೆಚ್ಚಿನ ಹಣವು ಇಲ್ಲಿ ವ್ಯಯವಾಗುತ್ತದೆ. ಬ್ರಿಟಿಷ್ ಮತ್ತು ಅಮೇರಿಕದ ಸಂಚಾರಿಗಳು ಈ ಪಾಪಕೂಪದಲ್ಲಿ ಭಾಗವಹಿಸುವಂಥವರು.

ವಿದೇಶಗಳಿಂದ ತರುಣಿಯರು!

ಈ ನಗರಕ್ಕೆ ವಿದೇಶಗಳಿಂದ ಎಷ್ಟೋ ತರುಣಿಯರು ಹೋಗಿ ತಮ್ಮ ಮನಸ್ಸಿನ ಇಚ್ಛೆಯನ್ನು ಪೂರೈಸಿಕೊಳ್ಳುತ್ತಾರೆ. ವ್ಯಭಿಚಾರ ಗೃಹಗಳನ್ನು ನಡೆಸುವವರು ಎಲ್ಲಾ ದೇಶಗಳಿಂದ ಸ್ತ್ರೀಯರನ್ನು ತರಿಸುವುದುಂಟು. ಈ ವ್ಯಾಪಾರವು ಬಹಳ ಗುಪ್ತವಾಗಿ ನಡೆಯುತ್ತದೆ. ಪ್ರತಿಯೊಂದು ದೇಶದಲ್ಲಿ ಈ ವ್ಯಾಪಾರವನ್ನು ನಡೆಸುವವರಿದ್ದಾರೆ. ಸ್ವಲ್ಪ ಸಮಯದ ಹಿಂದೆ ಜನಾಂಗಸಭೆಯವರು ಇದರ ರಹಸ್ಯವನ್ನು ಕಂಡು ಹಿಡಿಯುವುದಕ್ಕಾಗಿ ಬಹು ವಿಧದ ಯತ್ನಗಳನ್ನು ಮಾಡಿದರೂ, ಇನ್ನೂ ಈ ಹೇಯ ವ್ಯಾಪಾರವು ನಡೆಯುತ್ತಲೇ ಇದೆ. ಮಿಲಿಯಾಧಿಪತಿಗಳು ಎಲ್ಲಾ ದೇಶದ ತರುಣಿಯರನ್ನು ಬಯಸುವುದರಿಂದ ಅವರ ಇಚ್ಛೆಯನ್ನು ಪೂರೈಸುವುದಕ್ಕಾಗಿ ಈ ತನುವಿಕ್ರಯ ಸಂಸ್ಥೆಗಳು ಸಾಧ್ಯವಿರುವ ಎಲ್ಲಾ ಯತ್ನಗಳನ್ನು ಮಾಡುತ್ತವೆ.

ವ್ಯಭಿಚಾರಕ್ಕೆ ನ್ಯಾಯದ ರಕ್ಷಣೆ!

ಫ್ರಾನ್ಸಿನಲ್ಲಿ ಇತರ ದೇಶಗಳಂತೆ ವ್ಯಭಿಚಾರವು ಒಂದು ರಹಸ್ಯ ವಿಚಾರವಲ್ಲ. ಫ್ರೆಂಚ್ ಸರಕಾರವು ರಿಜಿಸ್ಟರ್ಡ್ ವ್ಯಭಿಚಾರ ಗೃಹಗಳನ್ನು ನಡೆಸಲೆಡೆಗೊಡುತ್ತದೆ. ಯಾವುದಾದರೊಂದು ವ್ಯಾಪಾರದಂತೆಯೇ ವ್ಯಭಿಚಾರವು ಫ್ರಾನ್ಸಿನಲ್ಲಿ ನಿರಾತಂಕವಾಗಿ ನಡೆಯುತ್ತಿದೆ, ವ್ಯಭಿಚಾರವಿಲ್ಲದೆ ಸಮಾಜವು ನಡೆಯಲಾರದೆಂಬ ಭಾವನೆಯು ಅವ

ರಲ್ಲಿ ಹುಟ್ಟಿದಂತಿದೆ. ಪುರಾತನ ರೋಮಾಯನರು ಸ್ತ್ರೀಯರನ್ನು ಬರಿಯ ಸೌಂದರ್ಯ ಸಾಧನಗಳನ್ನಾಗಿ ಉಪಯೋಗಿಸಿದಂತೆ ಫ್ರಾನ್ಸಿನಲ್ಲಿ ಈ ಕಾಲದಲ್ಲಿ ಕೂಡಾ ಸ್ತ್ರೀಯರಿಗೆ ಉಚ್ಚ ಸ್ಥಾನವು ಕೊಡಲ್ಪಡುವುದಿಲ್ಲ. ಸ್ತ್ರೀಯರಿಗೆ ಆರ್ಥಿಕ ಸ್ವಾತಂತ್ರ್ಯವಿದ್ದರೆ ವ್ಯಭಿಚಾರದಂತಹ ತನುವಿಕ್ರಯ ವಿಧಾನಗಳು ಎಂದೋ ನಿಂತು ಹೋಗುತ್ತಿದ್ದುವು.

### ಕಾಲೇಜಿನೆದುರು ವ್ಯಭಿಚಾರಗೃಹ

ಫ್ರಾನ್ಸಿನಲ್ಲಿ ಕಾಲೇಜಿನೆದುರು ವ್ಯಭಿಚಾರ ಗೃಹಗಳಿವೆ. ಸೂಳೆಯರು ವಿದ್ಯಾರ್ಥಿಗಳ ಭುಜಕ್ಕೆ ಭುಜ ತಗಲಿಸಿಕೊಂಡು ನಡೆಯುತ್ತಾರೆ. ಪ್ಯಾರಿಸಿನಲ್ಲಿ ಸುಖ ಸಾಧನಗಳು ದಿನೇ ದಿನೇ ಬಹುವಾಗಿ ಹೆಚ್ಚುತ್ತಿವೆ. ಪಾಶ್ಚಾತ್ಯ ನಾಗರಿಕತೆಯ ವೈಚಿತ್ರ್ಯಗಳ ಪರಿಣಾಮವಾಗಿ ಸ್ತ್ರೀ ಪುರುಷರು ಆಚರಿಸುವ ನೀತಿಯ ಮಟ್ಟವು ಬಹಳ ಕೆಳಗಿನದಾಗಿದೆ.

### ದೇವಾಲಯದೆದುರು ನಗ್ನಚಿತ್ರ ವಿಕ್ರಯ!

ಪವಿತ್ರವೆಂದೆನಿಸಲ್ಪಡುವ ಇಗರ್ಜಿ, ದೇವಾಲಯಗಳೆದುರು ನಿರ್ಲಜ್ಜೆಯಿಂದ ವಿವಿಧ ಭಾವಭಂಗಿಗಳ ನಗ್ನ ಚಿತ್ರಗಳು ಮಾರಲ್ಪಡುತ್ತವೆ. ಜಾಹಿರಾತಿಗಾಗಿ, ಕಣ್ಣಿಗೆ ಸೊಗಸಾಗಿ ಕಾಣುವ ನುಣ್ಣೊಡೆಗಳ, ಮೈಮೇಲೆ ಒಂದಿನಿತು ವಸ್ತ್ರವಿಲ್ಲದ ಸ್ತ್ರೀಯರ ಮನಮೋಹಕ ಚಿತ್ರಗಳನ್ನು ತೂಗಹಾಕಿರುತ್ತಾರೆ. ಇಂತಹ ಹೇಯವೃತ್ತಿಗೆ ಇಷ್ಟರ ಮಟ್ಟಿನ ಸ್ವಾತಂತ್ರ್ಯವನ್ನು ಜನತೆಯು ಕೊಟ್ಟಿರುವಾಗ ಅಲ್ಲಿಗೆ ಹೋಗುವ ಸಂಚಾರಿಗಳ ನೀತಿಯು ಹೇಗಿರಬಹುದೆಂದು ಪ್ರತ್ಯೇಕ ಹೇಳಬೇಕಾಗಿಲ್ಲ.

### ವಿಚಿತ್ರ ವೃತ್ತಿ!

ಜಾಹಿರಾತಿಗಾಗಿ ಸುಂದರ ನೀರೆಯರ ಚಿತ್ರಗಳನ್ನುಪಯೋಗಿಸುವುದು ಎಲ್ಲರಿಗೂ ತಿಳಿದ ವಿಚಾರವಾಗಿದೆ. ಜನರ ದೃಷ್ಟಿಯು ಬಹಳ ಸುಲಭವಾಗಿ ಬರೆಯಲ್ಪಟ್ಟ ಅಕ್ಷರ ಗಡೆಗೆ ಹರಿಯಬೇಕಾದರೆ ಸೌಂದರ್ಯದ ಆಕರ್ಷಣೀಯ ಸಾಧನವೊಂದು ಬೇಕೇ ಬೇಕಾಗುತ್ತದೆಂದು ಎಲ್ಲರೂ ಮನಗಂಡಿದ್ದಾರೆ. ಅದಕ್ಕಾಗಿಯೇ ನಾವಿಂದು ಪ್ರತಿ ಮನೆಯ ಗೋಡೆಯಲ್ಲಿ ತೂಗಾಡುತ್ತಿರುವ ಕೆಲೆಂಡರುಗಳಲ್ಲಿ ಆಕರ್ಷಣೀಯ ಚಿತ್ರಗಳನ್ನು ಕಾಣುತ್ತಿರುವುದಾಗಿದೆ. ಭಾರತದಲ್ಲಿ ಇಷ್ಟರ ತನಕ ಚಲನಚಿತ್ರ ಸುಂದರಿಯರ ಚಿತ್ರಗಳನ್ನು ಪಯೋಗಿಸುವುದಕ್ಕಿಂತ ಹೆಚ್ಚಿನದೇನೂ ಪ್ರಾರಂಭವಾಗಲಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ತಮ್ಮ ಭಾವಚಿತ್ರವನ್ನು ವಿವಿಧ ಕಂಪೆನಿಗಳಿಗೆ ಮಾರುವವರಿದ್ದಾರೆ. ಪತ್ರಿಕೆಗಳಲ್ಲಿ ನಾವು ಕಾಣಬಹುದಾದ ಹಲಕೆಲವು ಪ್ರಶಂಸೆಗಳನ್ನು ಪ್ರಸಿದ್ಧ ಸಿನೆಮಾ ನಟಿಯರು ಮಾಡಿದ್ದಾರಷ್ಟೆ. ಅದಕ್ಕಾಗಿ ಕಂಪೆನಿಯವರು ಅವರಿಗೆ ಹಣ ಕೊಡುತ್ತಾರೆ. ಪಾಶ್ಚಾತ್ಯ ಪತ್ರಿಕೆಗಳನ್ನು ನೋಡಿದರೆ ಅರೆನಗ್ನವಾಗಿ ವಿವಿಧ ಭಾವಭಂಗಿಗಳಲ್ಲಿರುವ ಸ್ತ್ರೀಯರ ಭಾವ-ಚಿತ್ರಗಳನ್ನು ಕಾಣಬಹುದು. ಇಂಥ ಚಿತ್ರಗಳಿಗೆ ತಮ್ಮ ಭಂಗಿ (Pose)ಗಳನ್ನು ಕೊಡುವ ಸ್ತ್ರೀ ಸಂಗಡಗಳು ಪ್ಯಾರಿಸಿನಲ್ಲಿವೆ. ಈ ಸ್ತ್ರೀಯರು ಫೊಟೋಗ್ರಾಫರನು ಹೇಳಿದಂತೆ ನಿಲ್ಲಲು ಸಿದ್ಧರೆ. ಎಂಥ ವಸನಗಳನ್ನು ತೊಡಲಿಕ್ಕೂ ಅವರು ಹಿಂಜರಿಯುವುದಿಲ್ಲ. ಬತ್ತಲೆಯಾಗಿ ನಿಂತುಕೊಳ್ಳಲೂ ಅವರಿಗೆ ಅಂಜಿಕೆಯಿಲ್ಲ. ಪತ್ರಿಕೆಗಳಲ್ಲಿ ಪ್ರಕಟವಾಗಿ ಕೋಟಿಗಟ್ಟಲೆ ಜನರು ಅವರ 'ಮಾನ'ವನ್ನು ನೋಡುವರೆಂಬುದನ್ನು ಕೂಡಾ ಅವರು ಲಕ್ಷಿಸುವುದಿಲ್ಲ.

### ಮುಂದಿನ ಲೇಖಾಂಕದಲ್ಲಿ–

ಈ ಲೇಖಾಂಕದಲ್ಲಿ ಪೀಠಿಕಾರೂಪವಾಗಿ ಕೆಲವು ವಿಚಾರಗಳನ್ನು ಮಾತ್ರ ಬರೆದಿರುತ್ತೇವೆ. ಮುಂದಿನ ಲೇಖಾಂಕದಲ್ಲಿ ಪ್ರಸಿದ್ಧ ಲೋಕ ಸಂಚಾರಿಗಳೊಬ್ಬರು ಪ್ಯಾರಿಸಿನಲ್ಲಿ ಕಂಡ ವಿವಿಧ ದೃಶ್ಯಗಳು, ಅಲ್ಲಿಯ ಪಾಪಕೂಪಗಳಲ್ಲಾಗುತ್ತಿರುವ ಅತ್ಯಾಚಾರ, ಅಲ್ಲಿಯ ಸ್ತ್ರೀ ಪುರುಷರ ನಿರ್ಲಜ್ಜಾ ಸ್ವಭಾವ, ಭೀಕರ ಸಂಭೋಗ ವಿಧಾನ, ವ್ಯಭಿಚಾರ ಗೃಹಗಳನ್ನು ನಡೆಸುವವರು ಜಗತ್ತಿನ ವಿವಿಧ ಭಾಗಗಳಿಂದ ಸುಂದರಿಯರನ್ನು ಕ್ರಯಕ್ಕೆ ಕೊಂಡುಕೊಳ್ಳುವ ಏರ್ಪಾಡಿನ ರಹಸ್ಯ, ಕ್ಯಾಬರೆಟ್‌ಗಳಲ್ಲಿ ಮಾದಕ ಪದಾರ್ಥಗಳ ಉಪಯೋಗ, ವ್ಯಭಿಚಾರ ಗೃಹಗಳ ಜಾಹಿರಾತು ಕ್ರಮ ಇವೇ ಮೊದಲಾದ ನೂರಾರು ಸ್ವಾರಸ್ಯಮಯ ವಿಷಯಗಳು ಬರಲಿವೆ. ಶರೀರ ಪ್ರಕೃತಿಯನ್ನು ಸುಧಾರಿಸಿಕೊಂಡು ಸೌಂದರ್ಯವನ್ನು ಹೆಚ್ಚಿಸಿಕೊಂಡ ಸುಂದರಿಯರ ನಗ್ನ ಸೌಂದರ್ಯವನ್ನು ಪ್ರದರ್ಶಿಸುವ ಹಲವಾರು ಚಿತ್ರಗಳು ಇವೇ ಮೊದಲಾದುವುಗಳನ್ನು ಕಾಣುವಿರಿ.

---



ರಕ್ತವರ್ಣದ ಮುಖಮಾಡಿಕೊಂಡು ಹಬ್ಬವನ್ನಾಚರಿಸಲಿಕ್ಕೇ ಬೇಕೆಂದವಳು ಸರಲೆ.

# ನಾಸ್ತಿಕ

ಕತೆಗಾರರು:
ಶ್ರೀ. ಹರಿದಾಸ, ಮೂಲ್ಕಿ.

"ಈ ಬಾರಿಯು ಅಂತರಂಗವ ನ್ನೋದಿದೆಯಾ ಸರಲಾ."

"ಅದರಲ್ಲೇನಿದೆ. ಬರೇ ಗೊಡ್ಡು"

"ಗೊಡ್ಡು ಹೆಂಗಸರಾಗುವುದು ಪೇಪರು ಗೊಡ್ಡೆಂದೆನಿಸುವುದೇ."

"ತಿರುಳಿಲ್ಲದ ಪೇಪರು, ತಲೆಯಿ ಲ್ಲದ ಗಂಡಸರು ಎಲ್ಲಾ ಗೊಡ್ಡೇ ಸರಿ."

"ಬುದ್ಧಿಲ್ಲದ ಹೆಂಗಸರು ಗೊಡ್ಡಾ ಗುತ್ತಾರೆ."

"ಬಡ್ಡು ತಲೆಯವರಿಗಾಗಿ ಹೊ ರಟ ಅಡ್ಡ ಪುರಾಣವದು. ಗೊಡ್ಡು ಬರಹದಿಂದ ಕೂಡಿರುವಂಥಾದ್ದು."

"ನಿನ್ನಂಥಾ ಒಡ್ಡರಿಗೆ ಹಾಗೆ ಕಾಣಬೇಕಾದುದೇ ಸರಿ. ನೋಡು, ನಾಸ್ತಿಕನೆಂಬ ಹೆಸರಿನವರು ಬರೆದ ಲೇಖನ? ಎಷ್ಟು ವ.ಹತ್ವದ್ದಿದೆ?"

"ಅದೇ ಹೇಳಿದೆನಲ್ಲ ಗೊಡ್ಡು ಎಂಬು. ಇಲ್ಲದಿದ್ದರೆ, ದೇವರು ಇಲ್ಲ ವೆನ್ನುವ ಲೇಖನವನ್ನೂ ಮುದ್ರಿಸು ವುದೇ? ಅಪಪ್ರಚಾರವಲ್ಲವೇ? ನಾನು ಗವರ್ನ್‌ಮೆಂಟ್ ಆಫೀಸರ ಳಾಗಿದ್ದರೆ—"

"ದೇವಸ್ಥಾನಗಳನ್ನೆಲ್ಲ ಪುಡಿ ಮಾಡಿ ಬಂಗಲೆ ಕಟ್ಟಿಸುತ್ತಿದ್ದೆ."

"ಯಾರು?"

"ನಾನು ಅಥವಾ–"

"ಅಥವಾ ಇಲ್ಲ. ನೀವೇ. ನಾನಂ ಥ ನಾಸ್ತಿಕಳಲ್ಲ."

"ನಾನಹುದು."

"ಇರಬಹುದು. ಆದರೆ ನಾಳೆಯು ಮಟ್ಟಿಗೆ ಆಗ ಕೂಡದು"

"ಏಕೆ"

"ತುಳಸಿ ಪೂಜೆ ವಿಜೃಂಭಣೆ ಯಿಂದಾಗಬೇಕು"

"ನಿನ್ನಲ್ಲಿ ಭಕ್ತಿಯಿಲ್ಲ. ಮಣ್ಣಿನ ಮುದ್ದೆಗೆ ನಾನು ಪೂಜೆಮಾಡ ಲಾರೆ."

"ಭಟ್ರು ಬರುತ್ತಾರೆ."

"ಅವರಿಗೆ ಕಾಸು ಕೊಡಲಾರೆ."

"ಪಾವಲಿಯೊದರೂ ಬೇಡವೆನ್ನು ವುದಿಲ್ಲ."

"ಅಂತೂ ತುಲಸೀಪೂಜೆ ಆಗ ಲಿಕ್ಕೇ ಬೇಕು. ಸಾಲಮಾಡಿಯಾ ದರೂ ಆಸ್ತಿಕನೆನಿಸಿಕೊಳ್ಳಬೇಕು. ಅಲ್ಲವೇ?"

"ಅಹುದು."

"ಸಾಲ ಸಿಗದಿದ್ದರೆ."

"ಬಂಗಾರ ಅಡವಿಡಿರಿ. ಅಥವಾ ಬೇರೇನಾದರೂ ಉಪಾಯ ಮಾಡಿರಿ."

"ಕದಿಯಲೇ, ಮೋಸಮಾ ಡಲೇ?"

"ಹೇಗಾದರೂ ಪರವಿಲ್ಲ, ತುಲಸೀ ಪೂಜೆ ಹಬ್ಬ, ಗೌಜಿಯಾಗ ಬೇಕು."

"ನೋಡು ಸರಲಾ. ನಿರರ್ಥಕ ಹಣ ಹಾಳುಮಾಡುವುದೇ? ಕೈಯ ಲ್ಲಿದ್ದರಂತೂ ಒಂದು ವಿಧ. ಇದು ಸಾಲಮಾಡಬೇಕಾಗಿದೆ. ನಾವು ಸಾಲಮಾಡಿ ಭಟ್ಟರನ್ನುದ್ಧಾರ ಮಾಡುವ ಹರಕೆ ಹೊತ್ತುದು ಯಾರು?"

"ಅದೇ ಹೇಳಿದೆನಲ್ಲ. ನಾಸ್ತಿಕರ ಲಕ್ಷಣವೇ ಹೀಗೆ ಎಂದು."

"ಅಂದರೆ ಆಸ್ತಿಕನೆನಿಸಬೇಕಾ ದರೆ ಹಾಗೆ ಮಾಡಬೇಕೇ?"

"ಅಹುದು."

"ಬೇಡ ಸರಲಾ. ಇನ್ನೊಂದು ಹಬ್ಬವನ್ನು ಆಚರಿಸೋಣ. ಈ ಬಾರಿ ಬಹಳ ಕಷ್ಟ."

"ಊಹೂ. ನಾಳೆ ಹಬ್ಬ ಆಗ ಲೇ ಬೇಕು."

"ಏನೇನು ಸಾಮಾನುಗಳು ಬೇಕು."

"ಬರೆದುಕೊಳ್ಳಿರಿ. ಒಂದು ಕಳ ಸಿಗೆ ಅವಲಕ್ಕಿ, ಒಂದು ಮಣ ಬೆಲ್ಲ."

"ರಾಮ-ರಾಮ!"

"ಪೆನ್ನಿನಲ್ಲಿ ಶಾಯಿಯಿಲ್ಲ."

"ಅವಲಕ್ಷ."

"ಅದೇ ಹೇಳಿದೆನಲ್ಲ. ದೇವರಿಗೂ ಬೇಡಾಗಿದೆ. ಕಾರಣ –"

"ಕಾರಣಗೀರಣ ಬೇಡ. ಪೆನ್ಸಿಲಿನಲ್ಲಿ ಬರೆದುಕೊಳ್ಳಿ. ಒಂದು ಕಳಸಿಗೆ ಅಕ್ಕಿ, ಒಂದು ವ.ಣ ಬೆಲ್ಲ, ೫೦ ತೆಂಗಿನಕಾಯಿ, ನಾಲ್ಕು ಸೇರು ಉದ್ದು ...... ಒಂದು ಗ್ರೂಸ್ ಪಟಾಕಿ..."

"ನಿಲ್ಲು ಸರಲಾ"

"ಏಕೆ?"

"ಪಟಾಕಿ ಬಿಡುವುವರಲ್ಲಿ ಗಟ್ಟಿಗನಾರು?"

"ನಿಮ್ಮ ಅಂತರಂಗದ ಮಾವು, ಪತ್ತೆ ನೀವು ತೋಮ!".

"ನಿನ್ನ ಅಪ್ಪ, ನನ್ನ ಮಾವ. ನನ್ನ ತಂದೆಯ ಭಾವ."

"ಅವರಿಗೆ ಪಟಾಕಿ ಬಿಡಲು ಗೊತ್ತೇ ಇಲ್ಲ.'

"ಗೊತ್ತಿಲ್ಲದೆಯೇ ನನಗೆ ನೂರು ರೂಪಾಯಿಗಳನ್ನು ಸೈಕಲ್ ಪಡೆಯಲಿಕ್ಕಾಗಿ ಕೊಡುವೆನೆಂದು ಪಟಾಕಿ ಬಿಟ್ಟದು."

"ಕೊಡುವವರಿದ್ದರೆ ನೀವೆಷ್ಟನ್ನೂ ಕೇಳಬಲ್ಲಿರಿ."

"ತರುವವನಿದ್ದರೆ ನೀನೆಷ್ಟು ಸಾಮಾನುಗಳ ಪಟ್ಟಿಯನ್ನೂ ಕೊಡಬಲ್ಲೆ."

"ಇದು ತುಲಸೀದೇವಿಗಾಗಿ."

"ಅದು ನಿನ್ನ ಆರಾಧ್ಯದೇವನಿಗಾಗಿ."

"ಸ್ಟ್ಯಾಕಲಲ್ಲಿ ಕುಳಿತರೆ ಜೀವ ಹಾಳು."

"ಸಾಲ ಮಾಡಿ ಹಬ್ಬ ಮಾಡಿದರೆ ಮಾನ ಹಾಳು."

"ಅದು ದೇವರ ಪ್ರೀತಿಗಾಗಿ."

"ದೇವರ ಪ್ರೀತಿಗಾಗಿ ಮಾನ ಕಳೆದುಕೊಳ್ಳುವುದೇ?"

"ಕಬೀರದಾಸರು ದೇವರ ಪ್ರೀತಿಗಾಗಿ ಕಳವುಮಾಡಿದರು."

"ನಾನೀಗ ಕಳವು ಮಾಡಿದರೆ ಪೋಲೀಸರು ಹಿಡಿದಾರು."

ಈಗಂತೂ ಸರಲೆಗೆ ಮಾತು ಮುಂದರಿಸಲಾಗಲಿಲ್ಲ. ರಕ್ತವರ್ಣದ ಮುಖ ಮಾಡಿಕೊಂಡು "ಹಬ್ಬವನ್ನಾಚರಿಸಲಿಕ್ಕೇ ಬೇಕು." ಎಂದು ಚೀರಿದಳು. ಆಗ ಮಾತ್ರ ನಾನು ಸುಮ್ಮನಾಗಲೇ ಬೇಕಾಯಿತು ಇನ್ನು ತರ್ಕಮಾಡಿದರೆ ಪರಿಣಾಮವು ಘೋರತಾಗಲಿಕ್ಕಿಲ್ಲವೆಂದು ಮನಸ್ಸಿನಲ್ಲೆಣಿಸುತ್ತ "ಸರಲಾ. ನಿನಗೆ ಸಮಾಧಾನವಿಲ್ಲವಾದರೆ ಬೇಡ. ನಾಸ್ತಿಕನಾದರೂ, ನಿನ್ನ ಸಲುವಾಗಿ ನಾಳಿನ ಮಟ್ಟಿಗೆ ಆಸ್ತಿಕನೆನಿಸುತ್ತೇನೆ" ಎಂದೆ. ಕೂಡಲೇ ಆಕೆಯ ಮುಖವು ಪ್ರಫುಲ್ಲಿತವಾಯಿತು. ಬಹಳ ಕಡಿಮೆ ಕರ್ಚಿನಲ್ಲಿ ಸುಧಾರಿಸುವ Plan ಹಾಕಿಕೊಟ್ಟಳು. ಹಾಗಾದರೂ ಸಾಮಾನಿನ ಪಟ್ಟಿಯು ಅರ್ಧ ತಾಮಿನಷ್ಟಾಯಿತು. ಅದನ್ನು ನೋಡಿ ಎದೆ ಒಡೆದಂತಾಯಿತಾದರೂ ಪುನಃ ನನ್ನ ಸರಲೆಯು ಕುಪಿತಳಾಗಬಾರದೆಂದು ಸುಮ್ಮನೆ ಪಟ್ಟಿಯನ್ನು ಜೇಬಿನಲ್ಲಿಟ್ಟುಕೊಂಡು ಪೇಟೆಗೆ ಹೊರಟೆ. "ಬೇಗನೇ ಸಾಮಾನುಗಳನ್ನು ಕಳಿಸಿರಿ." ಎಂಬಾಜ್ಞೆಯು ಹೊರಟಿತು. ಎಲ್ಲಿಂದ ತರಲಿ ಎಂದು ಚಿಂತಿಸುತ್ತಿದ್ದ ನಾನು "ಹೂ" ಎನ್ನಲಿಕ್ಕೂ ಮರೆತು ಬಿಟ್ಟು ಮುಂದರಿಸಿದೆನು.

X X X

"ಭಾವಾಜೀ. ಅಕ್ಕ ಕೂಡಲೇ ಬರಹೇಳಿದಳು."

"ನೀನಾವಾಗ ಬಂದೆ?"

"ಇದೇ ಈಗ. ನಿಮ್ಮೊರ್ವರನ್ನೂ ಕೂಡಲೇ ಕರೆದುಕೊಂಡು ಒರಲಿಕ್ಕಾಗಿ ತಂದೆಯವರು ಆಜ್ಞಾಪಿಸಿರುವರು."

"ನಿಲ್ಲು. ಸರಲೆಯು ಸಾಮಾನಿನ ಪಟ್ಟಿಕೊಟ್ಟಿದ್ದಾಳೆ. ಅಂಗಡಿಗೆ ಹೋಗಿ–"

"ಅದಾವುದೂ ಬೇಡವೆಂದಾಕೆಯು ನಿಮಗೆ ತಿಳಿಸಲಿಕ್ಕಾಗಿಯೇ. ನನ್ನನ್ನು ಕೂಡಲೇ ನಿಮ್ಮ ಬಳಿಗೆ ಕಳಿಸಿರುವಳು."

ಬದುಕಿದೆನೆಂದು ಮನಸ್ಸಿನಲ್ಲೆಣಿಸುತ್ತ ಮನೆಗೆ ಬಂದೆನು. ಬಾಗಿಲಲ್ಲಿ ಸರಲೆಯು ನಮ್ಮ ದಾರಿ ನಿರೀಕ್ಷಿಸುತ್ತ ನಿಂತಿದ್ದಳು ನನ್ನನ್ನು ನೋಡಿ "ಏನ್ರಿ ನಿಮ್ಮ ಮನಸ್ಸಿನಂತಾಯಿತಲ್ಲವೇ" ಎಂದಳು. ಗಾಂಭೀರ್ಯದಿಂದ ನಾನು ಏನೂ ಗೊತ್ತಿಲ್ಲದವನಂತೆ "ವಿಶೇಷವೇನು" ಎಂದು ಪ್ರಶ್ನಿಸಿದೆನು. "ತಂದೆಯವರು ನಿಮ್ಮೊರ್ವರಿಗೂ ಕರೆಕಳುಹಿಸಿರುತ್ತಾರೆ." "ಹೋಗಕೂಡದು ಹಬ್ಬದ ದಿನ. ದೇವೀಪೂಜೆಗೆ ವಿಘ್ನವಾಗಬಾರದು." "ಊಹೂ. ಹೋಗಲೇಬೇಕು." "ನೀನು ಆಸ್ತಿಕಳು. ತುಲಸೀಪೂಜೆ ಬಿಡುವುದೆ. ಭಟ್ರು ಬರುತ್ತಾರೆ." "ಅವರಿಗೆ ಹಿಂದಿರುಗಿ ಹೋಗಲು ದಾರಿಗೊತ್ತಿದೆ." 'ನಾಳೆ ಮಟ್ಟಿಗೆ ನಾನು ಆಸ್ತಿಕನಾಗುತ್ತೇನೆ' "ಕೂಡದು – ನೀವೆಂದೆಂದಿಗೂ ನಾಸ್ತಿಕರೇ ಇರಿ." "ನೀನು ಹೇಳಿದಂತೆ ನಾನಿರಲಾರೆ ನನ್ನ ಇಷ್ಟ." "ನಿನ್ನ ಇಷ್ಟ ನಿನಗೆ" "ಹಾಗಾದರೆ–" "ಹಾಗಾದರೆ ನೀನೊಬ್ಬಳೇ ಹೋಗು, ನಾನು ಬರಲಾರೆ" ಸರಲೆಯ ಮುಖವಿಷ್ಟು ಸಣ್ಣದಾಯಿತು. ಇನ್ನೇನು ಅಳುವುದಕ್ಕೆ

ಪ್ರಾರಂಭ. ಅಷ್ಟರಲ್ಲೇ ನಾನು ಸಮ್ಮತಿಯನ್ನು ಸೂಚಿಸಿದ ಕಾರಣ ಅವಳ ದುಃಖಾಚ್ಛಾದಿತ ಮುಖವು ಪ್ರಫುಲ್ಲಿತವಾಯಿತು. ಬೇಗನೇ ಹೊರಡುವ ಸಿದ್ಧತೆ ಮಾಡಿದಳು.

ಭಾವಾಜಿ ಕಾರ್ ಡ್ರೈವ್ ಮಾಡುತ್ತಿದ್ದ. ಹಿಂದಿನ ಸೀಟಿನಲ್ಲಿ ನಾವೀರ್ವರೂ ಕುಳಿತಿದ್ದೆವು. ಗ್ಲಾಡಿ (ನನ್ನ ಪ್ರೀತಿಯ ನಾಯಿ) ನನ್ನ ಕಾಲ ಬಳಿ ಕೂತಿತ್ತು. "ಸರಲಾ. ನಾಳೆ ಮಾವನವರೆದುರಿಗೆ ಪಟಾಕಿ ಬಿಡಬೇಡವೇನೇ?" ಎಂದು ಮಾತಿಗಾರಂಭಿಸಿದೆನು. ಆಕೆ ಮುಗುಳುನಗುತ್ತ "ಬೇಡವೆಂದೆನೇ, ಬೇಕಾದಷ್ಟು ಬಿಡಿರಿ" ಎಂದಳು. 'ಆದರೆ– ಅವರು ಕಡಿಮೆಯವರಲ್ಲ.' 'ನೀವೂ ಚಿಲ್ಲರೆಯಲ್ಲ.' 'ಇಬ್ಬರೂ ಪಟಾಕಿ ಬಿಟ್ಟರೆ ಕೇಳುವುದಾರು?' "ನಿಮ್ಮ ಮಟ್ಟಿಗೆ ನಾನು. ತಂದೆಯವರ ಮಟ್ಟಿಗೆ– – –" ಹೀಗೆ ಹರಟೆ ಮುಂದರಿಯಿತು. ನಾನು 'ನಮ್ಮ ತುಲಸೀಪೂಜೆ ಪಟಾಕಿ– – –' ಎಂದೆ 'ಅದಕ್ಕೆ ಯಾರೇನು ಮಾಡುವುದು. ಊರಲ್ಲಿದ್ದರೆ ನಾವು ಹಬ್ಬವಾಚರಿಸದೆ ಬಿಡುತ್ತಿದ್ದವೇ?' 'ಅದೇ ಹೇಳಿದೆನಲ್ಲ. ಎಲ್ಲಿ ಅನುಕೂಲವಿದ್ದರೆ ಭಕ್ತಿ ಪೂಜೆ. ಇತ್ಯಾದಿ. ಇಲ್ಲದಿದ್ದರೆ – – '– ಎಲ್ಲ ಪಟಾಕಿ. ಅದನ್ನೆಲ್ಲ ತಿಳಿಯದೇ ಆನಾಸ್ತಿಕ ಮಹಾಶಯರು ದೇವರ ವಿಷಯವಾಗಿ ಹಾಗೆ ಬರೆದರು.' 'ಛೆ ಛೆ ಹಾಗೆಲ್ಲ ಹೇಳಬಾರದು.' 'ನಿಜ. ತವರುಮನೆಯವರ ಕರೆಬಂದರೆ ಮನೆಯ ತುಲಸಿಗೆ ಪಟಾಕಿಯೇ ಗತಿ' 'ಭಕ್ತಿಯಿದೆಯಲ್ಲ?' 'ಅದೂ ಪಟಾಕೀ ಭಕ್ತಿ?' 'ಹಾಗಲ್ಲ, ಪ್ರಸಂಗವು ಹಾಗೆ ಬಂದಿತು. ದೇವರಿಗೆ ತಿಳಿಯುವುದಿಲ್ಲವೇ?' 'ಅನಾನುಕೂಲ ಪ್ರಸಂಗದಲ್ಲಿ ಪೂಜೆ ನಿಲ್ಲಿಸಲೂಬಹುದೆಂದು ಪಟಾಕಿ ಪುರಾಣದಲ್ಲಿ ಹೇಳಿದೆಯಲ್ಲವೇ?' "ಹಾಗೇನೇ ಶಾಸ್ತ್ರವು ಹೇಳುತ್ತಿದೆ. ಆದರೆ ಪಟಾಕಿ ಪುರಾಣದಲ್ಲಿಲ್ಲ" 'ಆದರೆ ಗಂಡನಲ್ಲಿ ಹಣವಿಲ್ಲದಿದ್ದರೆ ಸಾಲವನ್ನಾದರೂ ಮಾಡಿ ಆಸ್ತಿಕನೆನಿಸಬೇಕು. ಹೆಂಗುಸಿಗೆ ತವರುಮನೆಯ ಕರೆಬಂದರೆ ದೇವರಿಗಾದರೂ ಪಟಾಕಿ ತೋರಿಸಬೇಕು." ಸರಲೆಯು ತನ್ನ ಸೋಲಿಗಾಗಿ ನಾಚಿದಳು. ಆಗಲಂತೂ ಅವಳ ಮುಖವು ನನಗೆ ಬಹು ಮನೋಹರವಾಗಿ ಕಂಡಿತು. ಹಿಡಿದಾಲಂಗಿಸಿ ಅಧರಾಮೃತ ಪಾನವನ್ನು ಮಾಡಿ ತೃಪ್ತಿಗೊಂಡೆನು. ನನ್ನೀ ಅಧಿಕ ಪ್ರಸಂಗಕ್ಕಾಗಿ ಗ್ಲಾಡಿಯು ಸಿಟ್ಟುಗೊಂಡಿತೋ ಎಂಬಂತೆ ಬೊಗಳತೊಡಗಿತು.

---





# ನಿಮಗೆ ಬೇಸರವಾದಾಗ ನನಗೆ ಬರೆಯಿರಿ.

ಪ್ರಶ್ನೆಗಳನ್ನು ಕೇಳುವವರು ತಮ್ಮ ಸಂಪೂರ್ಣ ವಿಳಾಸವನ್ನು ಕೊಡಬೇಕು. ಪೂರ್ಣ ವಿಳಾಸಗಳನ್ನು ಕೊಡದವರ ಪ್ರಶ್ನೆಗಳು ಉತ್ತರಿಸಲ್ಪಡಲಾರವು. ಪ್ರಶ್ನೆಗಳು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಡಬೇಕು. ಅಯೋಗ್ಯವೆಂದು ಕಂಡುಬಂದ ಪ್ರಶ್ನೆಗಳಿಗೆ ಉತ್ತರಕೊಡಲಾಗುವುದಿಲ್ಲ. ತಮ್ಮ ಪ್ರಶ್ನೆಗಳು ಹಿಂದೆಕಳುಹಿಸಲ್ಪಡಬೇಕೆಂದು ಬಯಸುವವರು ಅದಕ್ಕಾಗುವ ಅಂಚೆಚೀಟನ್ನು ಕಳುಹಿಸಿಕೊಡಬೇಕು.

**ಶ್ರೀ. ಯಸ್. ಸುಂದರಯ್ಯ, ಚಾಮರಾಜ ನಗರ.**

"ಕೇವಲ ಶೈಶವಾವಸ್ಥೆಯಲ್ಲಿಯೇ ಪಿತೃವನ್ನು ಕಳೆದುಕೊಂಡು ಸೋದರ ಮಾವನ ಮನೆಯಲ್ಲಿಯೇ ಬೆಳೆದು ತಿಳುವಳಿಕೆ ಬಂದು ವಿದ್ಯಾಭ್ಯಾಸ ವಿವಾಹಾದಿಗಳು ಆದ ನಂತರ ನನ್ನ ಸ್ವಂತ ಊರಾದ ನಗರಕ್ಕೆ ಬಂದು ಇಲ್ಲಿಯ ಮುನಿಸಿಪಾಲಿಟಿಯಲ್ಲಿ ನೌಕರಿಯನ್ನು ಮಾಡಿಕೊಂಡು ನನ್ನ ಸ್ವಂತ ಮನೆಯ ಅಂದರೆ ನಮ್ಮ ಚಿಕ್ಕಪ್ಪಂದಿರಿರುವ ಮನೆಯ ಅರ್ಧಭಾಗದಲ್ಲಿ ಈಗ್ಗೆ ೪ ತಿಂಗಳುಗಳಿಂದಲೂ ಸಂಸಾರ ಸಹಿತವಾಗಿರಲು ಏರ್ಪಾಡು ಮಾಡಿಕೊಂಡಿರುತ್ತೇನೆ. ನನ್ನ ದಾಯಾದಿಯಾದ ಇವರು ನನಗೆ ಪದೇ ಪದೇ ಕಿರುಕುಳವನ್ನು ಕೊಡುತ್ತಲೂ ಇತರರಿಂದ ಕೊಡಿಸುತ್ತಲೂ ನಮ್ಮನ್ನು ಬಹಳವಾಗಿ ಹಿಂಸಿಸುತ್ತಿದ್ದಾರೆ. ನಾವು ಎಷ್ಟೇ ಸೋತು ಆತ್ಮಮೆಚ್ಚುಗೆಯಿಂದ ಹೋಗುತ್ತಿದ್ದಾಗ್ಯೂ ಸಹ ದಾಯಾದಿ ಮತ್ಸರವನ್ನು ಕ್ರೂರವಾಗಿ ತೋರುತ್ತಿದ್ದಾರೆ. ನನಗೆ ತಿನ್ನಲು, ವಾಸಿಸಲು ಅನುಕೂಲವಿರುವುದರಿಂದ ಅವರೆದುರಿಗೆ ಇಲ್ಲಿಯೇ ಸಂಸಾರಮಾಡಬೇಕೆಂದು ಹಠ. ಇದನ್ನು ಹೇಗೆ ಸಾಧಿಸಲಿ? ದಯಮಾಡಿ ತಿಳಿಸುವಿರಾ?"

ನಿಮ್ಮ ಕರುಣಾಜನಕ ಪರಿಸ್ಥಿತಿಯನ್ನು ಕಂಡು ನನಗೆ ಬೇಸರವಾಗುತ್ತಿದೆ. ನಿಮ್ಮೆದುರು ಹಟತೊಟ್ಟು ನಿಂತಿರುವ ಸಮಸ್ಯೆಯನ್ನು ಬಿಡಿಸುವುದು ಅಷ್ಟೊಂದು ಮಹತ್ವದ ಕೆಲಸವಲ್ಲ ನಿಮ್ಮ ದಾಯಾದಿಯರು ನಿಮಗೆ ಕೊಡುತ್ತಿರುವ ಕಿರುಕುಳವನ್ನು ನೀವು ಸಹಿಸುವ ಅವಶ್ಯವೇ ಇಲ್ಲ. ನಿಮಗೆ ಅವರ ಹಂಗಿನಲ್ಲಿರಬೇಕೆಂದಿದ್ದರೆ ನೀವು ಅನುಕೂಲ ಸಿಂಧುಶಾಸ್ತ್ರಕ್ಕನುಸಾರವಾಗಿ ಅವರಿಗೆ ಬಗ್ಗುವುದು ಸಹಜವಿತ್ತು. ಆದರೆ ನಿಮಗೆ "ತಿನ್ನಲು, ವಾಸಿಸಲು ಅನುಕೂಲ"ವಿದೆಯೆಂದು ನೀವೇ ಹೇಳುತ್ತಿದ್ದೀರಿ. ವಸ್ತುಸ್ಥಿತಿಯು ಹೀಗಿರುವಾಗ ನೀವು ಬಗ್ಗುವುದರಲ್ಲಿ ಅರ್ಥವಿಲ್ಲ. "ಬಗ್ಗಿದವ ತಗ್ಗಿಯಾನು" ಎಂಬ ಜಾಣ್ನುಡಿಯನ್ನು ಜಗತ್ತಿಗೆ ಹಿಟ್ಲರ್ ಮಹಾಶಯನೇ ಕಲಿಸಿಕೊಟ್ಟಿದ್ದಾನೆ. ಪ್ರತಿಯೊಬ್ಬನೂ ತನ್ನ ವ್ಯಕ್ತಿತ್ವವನ್ನು ರಕ್ಷಿಸಿಕೊಳ್ಳಬೇಕು. ಇತರರು ಕೊಡುವ ಕಿರುಕುಳಗಳಿಗಾಗಿ ಮರುಗುವವರು ಕಿಡಿಗೇಡಿಗಳೆಂಬುದರಲ್ಲಿ ನಿಮಗೆ ಸಂಶಯ ಬೇಡ. ಅದುಕಾರಣ ನೀವು ನಿಮ್ಮನ್ನು ಹಿಂಸಿಸುವವರಿಗೆ ಪ್ರತಿಹಿಂಸೆಯನ್ನು ಮಾಡಬೇಕು. ಅವರು ನಿಮಗೆ ದಿನಕ್ಕೆ ಹತ್ತುಬಾರಿ ಕಿರುಕುಳ ಕೊಡುವುದಿದ್ದರೆ ನೀವು ೫೦ ಬಾರಿ ಕೊಡಬೇಕು. ಆಗ ಅವರ ಬೇಳೆ ನಿಮ್ಮೊಡನೆ ಬೇಯುವುದಿಲ್ಲವೆಂದು ಅವರಿಗೆ ಸ್ಪಷ್ಟವಾಗುತ್ತದೆ. ಹೀಗೆ ಮಾಡಿದರೆ ಅವರೆದುರಿಗೇ ಸಂಸಾರ ಮಾಡಿ ನಿಮ್ಮ ಹಠವನ್ನು ನೀವು ಯಶಸ್ವಿಯಾಗಿ ಸಾಧಿಸಬಹುದಾಗಿದೆ. ಇದರಲ್ಲಿ ನೀವು ಯಶಸ್ವಿಯಾಗದೆ ಬೇಸರ ಹುಟ್ಟಿದರೆ ನನಗೆ ಪುನಃ ಬರೆಯಿರಿ.

೦೦೦

**ಶ್ರೀ. ದೊಡ್ಡೇರಿ ವೆಂಕಟಗಿರಿ ರಾವ್, ಸಾಗರ.**

"ಬೇಸರವಾದಾಗ ಏನಾದರೊಂದು ಬರೆದು ಕೇಳಬೇಕೆಂದಿದ್ದ ನನಗೆ ಈವರೆಗೆ ಬೇಸರವೇ ಆಗದಿದ್ದುದು ಆಶ್ಚರ್ಯವಲ್ಲವೆ? ಇಹು ನೋಡಿ ಈ ದಿನದ ಪ್ರಜಾಮಿತ್ರ ಓದುವಾಗ್ಗೆ 'ಪರದೇಶಗಳಲ್ಲಿ ಸ್ವಪ್ರತಿಷ್ಠೆಯನ್ನು ಜಾಹಿರಾತು ಪಡಿಸಲು

ಜರ್ಮನಿಯು ೩೦ ಲಕ್ಷ ಪೌಂಡುಗಳನ್ನೂ . . . . ಹೀಗೆ ಇನ್ನೂ ಎರಡು ಮೂರು ರಾಷ್ಟ್ರಗಳು ಎಷ್ಟೆಷ್ಟೋ ಖರ್ಚು ಮಾಡುತ್ತಿವೆಯೆಂತ ಓದಿದೆ. ನನಗೆ ಅನ್ನಿಸಿತು- ನಮ್ಮದೇ ನಮಗೆ ಗೊತ್ತಿಲ್ಲ; ಇನ್ನೊಬ್ಬರದು ತಿಳಿದುಕೊಂಡು ಏನು ಮಾಡೋಣ ಎಂದು. ನೀವಾದರೂ ಮೈಸೂರು ಸರಕಾರವು ಪರರಾಷ್ಟ್ರಗಳಲ್ಲಿ ಸ್ವಪ್ರತಿಷ್ಠೆಯನ್ನು ಬೆಳೆಸಲು ಎಷ್ಟು ವೆಚ್ಚ ಮಾಡುವುದೆಂಬುದನ್ನು ವಿಚಾರಿಸಿ ಲೆಕ್ಕಾ ತಿಳಿಸುವಿರಾ?''

ನಿಮ್ಮ ಪ್ರಶ್ನೆಯ ಪ್ರಥಮ ವಾಕ್ಯವನ್ನೋದಿದಾಗಲೇ ನೀವು ಪುಣ್ಯಾತ್ಮರೆಂದು ನನಗರಿಯಿತು. ಈ ವರೆಗೆ ನಿಮಗೆ ಬೇಸರವಾಗದಿದ್ದುದು ಜಗತ್ತಿನ ಮಹದಾಶ್ಚರ್ಯಗಳಲ್ಲೊಂದೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ. ಕಾರಣ- ಈ ಜಗತ್ತಿನಲ್ಲಿ ಬೇಸರವಾಗದಿರುವವರು ತೀರಾ ವಿರಳ. ಪ್ರಾಯಶಃ ನೀವು ಅತಿಮಾನುಷರ ಸಾಲಿಗೆ ಸೇರಲಿರುವವರೆಂದು ನನ್ನ ಭಾವನೆ. ಬೇಸರವಾಗುವ ಸಂಗತಿಯಂತಿರಲಿ.

ಸ್ವಪ್ರತಿಷ್ಠೆಗಾಗಿ ಜರ್ಮನಿಯು ಪ್ರತಿ ವರುಷ ೩೦ ಲಕ್ಷ ಪೌಂಡುಗಳನ್ನು ವೆಚ್ಚಮಾಡುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಪ್ರತಿಯೊಬ್ಬನೂ ಪ್ರತಿಷ್ಠೆಯನ್ನು ಹೆಚ್ಚಿಸುವುದಕ್ಕಾಗಿ ತನ್ನ ಕೈಲಾದಷ್ಟು ಹಣವನ್ನು ವೆಚ್ಚಮಾಡುತ್ತಾನೆ. ಕೈಯ್ಯಲ್ಲಿ ಕಾಸಿಲ್ಲದ ಬಡ ಬರಹಗಾರರು ತಮ್ಮ ಹೆಸರಿನ ಮುದ್ದುಮುದ್ದಾದ ಅಕ್ಷರಗಳನ್ನು ಪತ್ರಿಕೆಗಳಲ್ಲಿ ಕಾಣುವುದಕ್ಕಾಗಿ ಜೇಬಿನಲ್ಲಿರುವ ಪುಡಿ ಕಾಸುಗಳನ್ನು ಅಂಚೆ ಇಲಾಖೆಗೆ ದಾನಮಾಡುತ್ತಾರೆ. ಸಾಲಮಾಡಿಯಾದರೂ ಒಬ್ಬ ಕೌನ್ಸಿಲರನೋ, ಜಿಲ್ಲಾ ಬೋರ್ಡು ಮೆಂಬರನೋ ಅಥವಾ ಎಂ. ಎಲ್. ಎ. ಯೋ ಆಗಲಿಕ್ಕಾಗಿ ಇದ್ದ ಹಣ ಸಾಲದೆ ಹಿಂದೆ ಕೊಡುವೆನೆಂಬ ಧೈರ್ಯವಿಲ್ಲದಿದ್ದರೂ ಸಾಲ ಮಾಡಿ ಚುನಾವಣೆಗಾಗಿ ಖರ್ಚುಮಾಡುತ್ತಾರೆ. ತಾನು ಮಾಡಿದುದು ಸರಿಯೆಂಬುದಕ್ಕಾಗಿ ಡಾ। ಖರೆಯವರು ಶತಪ್ರಯತ್ನಗಳನ್ನು ಮಾಡುತ್ತಿದ್ದಾರೆ. ತಮ್ಮ ವಿಧಾನಗಳು ಸರಿಯೆಂದು ಸ್ಪಷ್ಟಗೊಳಿಸಿ ಆ ಮೂಲಕ ಸ್ವಪ್ರತಿಷ್ಠೆಯನ್ನುಳಿಸುವುದಕ್ಕಾಗಿ ರಾಜಕೀಯ ಧುರೀಣರು ಜೀವದಾನ ಮಾಡಿಯಾದರೂ ಹೋರಾಡುತ್ತಾರೆ. ಇವೆಲ್ಲಾ ಏತಕ್ಕಾಗಿ? ಸ್ವಪ್ರತಿಷ್ಠೆಯನ್ನು ಹೆಚ್ಚಿಸುವುದಕ್ಕಾಗಿ! ಹೀಗಿರುವಾಗ ಕೇವಲ ಪ್ರಚಾರಕಾರ್ಯದ ಬಲದಿಂದಲೇ ಅದ್ಭುತ ತುಂಟತನವನ್ನು ತೋರಿ ಲಾಭ ಹೊಂದುತ್ತಿರುವ ಹಿಟ್ಲರನು ಸಾಲಪಡೆದಾದರೂ ೩೦ ಲಕ್ಷ ಪೌಂಡು ಖರ್ಚು ಮಾಡುತ್ತಿರುವುದರಲ್ಲಿ ನಿಜವಾಗಿಯೂ ವಿಶೇಷವಿಲ್ಲ.

''ನಮ್ಮದು ನಮಗೆ ಗೊತ್ತಿಲ್ಲ'' ಎಂದು ನೀವು ಹೇಳಿರುವುದು ಅಕ್ಷರಶಃ ನಿಜವಾಗಿದೆ. ''ಮೈಸೂರು ಸರಕಾರವು ಪರರಾಷ್ಟ್ರಗಳಲ್ಲಿ ಸ್ವಪ್ರತಿಷ್ಠೆಯನ್ನು ಬೆಳೆಸಲು ಎಷ್ಟು ವೆಚ್ಚಮಾಡುವು''ದೆಂಬುದು ನನಗೂ ಗೊತ್ತಿಲ್ಲ. ಆದರೆ ಪ್ರಚಾರ ಕಾರ್ಯಕ್ಕಾಗಿ ಅದು ದೇಶದ ಒಳಗೂ ಹೊರಗೂ ವೆಚ್ಚಮಾಡುತ್ತಿದೆಯೆಂಬುದು ಮಾತ್ರ ನಿಜವಾಗಿದೆ. ನಿಮಗೆ ಈ ಕುರಿತು ವಿಶೇಷ ಮಾಹಿತಿಯು ಸಿಗಲೇಬೇಕೆಂದಿದ್ದರೆ ಮೈಸೂರಿನ ಮಾನ್ಯ ದಿವಾನರಾದ ಸರ್. ಮಿರ್ಜಾ ಇಸ್ಮಾಯಿಲ್‌ರವರಿಗೆ ಬರೆಯುವುದು ಲೇಸೆಂದು ನನ್ನ ಸೂಚನೆ. ಯೋಗ್ಯ ಉತ್ತರ ದೊರಕಿದರೆ ನನಗೂ ತಿಳಿಸಿಬಿಡಿರಿ.

ಕೆ. ಮಂಜುನಾಥ ಪ್ರಭು
ಮರ್ಚಂಟ್, ಕಾರ್ಕಳ. ದ. ಕ.

---

''ಮಹಾಶಯರೇ ತಮ್ಮ 30-10-38 ರ ಸಂಚಿಕೆಯಲ್ಲಿ 16ನೇ ಪುಟದಲ್ಲಿ 29 ನೇ ಪುಟದಿಂದ ಮುಂದುವರಿಸಿದ್ದು- ಎಂತ ಬರೆದಿದ್ದೀರಿ. 29ನೇ ಪುಟ ನೋಡಿ ಈ ಇಡೀ ಸಂಚಿಕೆಯನ್ನು ನೋಡಿದರೂ ಸಹಾ ಅದರ ಮೊದಲಿನ ವಾಕ್ಯಗಳೇ ನನಗೆ ಸಿಕ್ಕಲಿಲ್ಲ. ಆದ್ದರಿಂದ ಬರಿಯದೆ 'ಇದ್ದು ಬರೆದಂತೆ ಯಾಕೆ ತೋರಿಸಿಕೊಳ್ಳುತ್ತೀರಿ. ತಿಳಿಸಿರಿ.

ನೀವು ಎಂದಾದರೂ ಭೂತ ಪಿಶಾಚಿಗಳ ಕಥೆಯನ್ನು ಕೇಳಿರಬಹುದು. ಕೇಳಿ ವಿಸ್ಮಯಗೊಂಡಿರಬಹುದು. ನಂಬಿರಬಹುದು, ಹೆಚ್ಚೇಕೆ, ನಿರ್ಜನ ಪ್ರದೇಶದಲ್ಲಿ ಕತ್ತಲಲ್ಲಿ ನಡೆಯಲು ಬೆದರಿರಬಹುದು.

ನಂಬುವವರನ್ನು ಬೆದರಿಸುವ ಈ ಭೂತಪಿಶಾಚಿಗಳು ಎಲ್ಲಾ ಕಡೆಗಳಲ್ಲಿಯೂ ಇರುತ್ತವೆಂಬುದನ್ನು ತಿಳಿಯಲು ನಿಮಗೆ ಬಹಳ ಆಶ್ಚರ್ಯವಾಗಬಹುದು.

೧೬ಕ್ಕೂ ೨೯ಕ್ಕೂ ಅಂತರವೆಷ್ಟೆಂದು ಕೇಳಿದರೆ ೧೩ ಎಂದು ನೀವು ಕೂಡಲೆ ಹೇಳುವಿರೆಂದು ನನಗೆ ಗೊತ್ತು. ಈ ಹದಿಮೂರು ಬಹಳ ಅಶುಭವಾದೊಂದು ಸಂಖ್ಯೆಯೆಂದು ಪಾಶ್ಚಾತ್ಯರು ನಂಬುತ್ತಾರೆ. ಪಾಶ್ಚಾತ್ಯರನ್ನು ಈಗಾಗಲೇ ಅನುಸರಿಸಿರುವ ನಾವು ಕೂಡಾ ಅವರ ನಂಬಿಕೆಯನ್ನು ಕೆಲವೊಮ್ಮೆ ಮಾನ್ಯಮಾಡುತ್ತೇವೆ.

ನಾನು ಹೀಗೆಲ್ಲಾ ಏಕೆ ಹೇಳುತ್ತಿದ್ದೇನೆಂದು ನೀವು ಆಶ್ಚರ್ಯಪಡಬಹುದ. ನೀವು ಮಾತ್ರವಲ್ಲ, ೧೬ನೆ ಪುಟದಲ್ಲಿ ೨೯ನೆ ಪುಟದಿಂದ ಮುಂದುವರಿಸಿದ್ದೆಂದು ಬರೆದಿರುವುದು ಏಕೆ ತಪ್ಪಿಹೋಯಿತೆಂದು ನಾನು ಕೂಡಾ ಆಶ್ಚರ್ಯಪಡುತ್ತೇನೆ. ೧೬ರಿಂದ ೩೧ಕ್ಕೆ ಮುಂದುವರಿಸಿದ್ದರೆ ಈ ಅನಾಹುತವಾಗುತ್ತಿತ್ತೆ? ಇಲ್ಲ. ಕಾರಣ-ಅವುಗಳೊಳಗಿನ ಅಂತರ ೧೫. ಯಾವಾಗಲೂ ೧೫ ಶುಭಸಂಖ್ಯೆ.

ಇಷ್ಟೆಲ್ಲಾ ಅನಾಹುತವನ್ನು ಮಾಡಿದ ಕೀರ್ತಿಯು ಆ ಭೂತಕ್ಕೆ ಸಲ್ಲುತ್ತದೆ. ಆ ಭೂತಕ್ಕೆ ಮುದ್ರಣಾಲಯದವರು 'ಮುದ್ರಣ ಭೂತ'ವೆನ್ನುತ್ತಾರೆ. ಪ್ರತಿಯೊಬ್ಬರ ಕಣ್ಣಿನಿಂದ ತಪ್ಪಿಸಿಕೊಂಡು ಅದೊಂದು ಚೂರು ೧೬ನೆಯ ಪುಟದಲ್ಲಿ ಸೇರಿಕೊಂಡಿರುವುದಾದರೂ ಏಕೆ?

ನಿಮಗೆ ಗೊತ್ತಿರಬಹುದು. ಕೆಲವೊಮ್ಮೆ ನಮಗೆ ಬೇಡವಾದ ಹಾವುಗಳು ನಮ್ಮ ಸ್ವಾಗತವಿಲ್ಲದೇನೇ ಮನೆಯನ್ನು ಸಂದರ್ಶಿಸಿ ಎಲ್ಲರನ್ನೂ ದಿಗಿಲುಗೊಳಿಸುತ್ತಿವೆಯಲ್ಲಾ? ಇವುಗಳಿಗೇನು ಮದ್ದು? ಮನೆ ಎಷ್ಟು ಶುಚಿಯಾಗಿದ್ದರೂ ಬೇಡವಾದ ಈ ನಂಟರು ಬಂದೇ ಬಿಡುತ್ತಾರೆ ಅದೇ ರೀತಿಯಲ್ಲಿ 'ತುದಿಯಿಲ್ಲದ ಬುಡವೊಂದು ೧೬ನೆ ಪುಟವನ್ನು ಪ್ರವೇಶಿಸಿರಬೇಕು. ಅದನ್ನು 'ಬರೆಯದಿದ್ದು ಬರೆದಂತೆ ತೋರಿಸಿಕೊಂಡಿರು'ವೆನೆಂದು ನನಗೆ ಹೇಳಿರುವ ನೀವು ಪ್ರಮಾದವೆಂದು ತಿಳಿದಿದ್ದರೂ ಈ ಪ್ರಶ್ನೆಯನ್ನು ಕೇಳಿರುವುದೇಕೆಂದು ಹೇಳುವಿರಾ? ಪ್ರಾಯಶಃ 'ಬೇಸರ'ವಾದುದರಿಂದ ನೀವು ಹಾಗೆ ಮಾಡಿರಬೇಕು! ಹೇಗಿದ್ದರೂ ನೀವು ಪ್ರತಿವಾರ ಅಂತರಂಗವನ್ನು ತುದಿಯಿಂದ ಬುಡದವರೆಗೆ ಓದುತ್ತಿರುವುದು ಬಹಳ ಸಂತೋಷದ ಸಂಗತಿ.

---

# ನಕ್ಕು ವಿಚಾರಿಸುವಿರೋ? ▭ ▭ ▭

# ▭ ▭ ▭ ವಿಚಾರಿಸಿ ನಗುವಿರೋ?

[ವಿಚಾರ 'ಕೆಮರಾ'ದಿಂದ ಹಿಡಿದ 'ಸ್ನೇಪ್ ಶಾಟ್ಸ್' ದೃಶ್ಯಾವಳಿ.]

□ ∴ □

## ದೃಶ್ಯ ೨

(ದೀಕ್ಷಿತರು ಬೀದಿ ಕೇರಿ ಸುತ್ತಿ ಬಂದು ರಾತ್ರಿಯೂಟದ ಮೊದಲು ಸಂಧ್ಯಾವಂದನೆ ಶಾಸ್ತ್ರ ತೊಡಗಿದ್ದಾರೆ. ಅವರ ಮಗ ಕಿಟ್ಟು ಊಟಕ್ಕಾಗಿ ಕಾಯುತ್ತ ಹಾಕಳಿಸುತ್ತಿದ್ದಾನೆ.)

ದೀಕ್ಷಿತ:— ಓಂ ಪ್ರಣವಸ್ಯ ಪರಬ್ರಹ್ಮ ಋಷಿಃ ದೇವೀ ಗಾಯತ್ರೀ ಛಂದ . . . ಏನೋ ಕಿಟ್ಟೂ, ಪಾಠ ಓದೋದು ಬರೆಯೋದು ಬಿಟ್ಟು ಪುರಾಣ ಕೇಳೋ ಅಜ್ಜಮ್ಮಗಳ ಹಾಗೆ ಹಾಕಳಿಸುತ್ತ ಕೂತಿದ್ದಿಯಲ್ಲ!

ಕಿಟ್ಟು:— ಬೇಡಪ್ಪಾ ಅದೆಲ್ಲ ಅನಾಚಾರ. ನಾನು ಶಾಲೆಗೆ ಹೋಗಿ, ನೀನು, ಅಜ್ಜ, ಪಿಜ್ಜ ಎಲ್ಲ ನರಕಕ್ಕೆ ಬೀಳೋದು ಬ್ಯಾಡಾ!

ದೀಕ್ಷಿತ:— ಏನು ಅಸಂಬದ್ಧ ಮಾತಾಡ್ತೀ ಕಿಟ್ಟೂ! ಅದಕ್ಕೂ ಇದಕ್ಕೂ ಏನು ಸಂಬಂಧ?

ಕಿಟ್ಟು—:ಶಾಲೇಲಿ ನಾನು ಕೂತುಕೊಳ್ಳೋದು ಸಹ ಹರಿಜನ ಬಾಲಕನೊಂದಿಗೇ. ನಿನ್ನೆ ಸಂಜೆ ದೇವಸ್ಥಾನದ ಚಾವಡಿಯಲ್ಲಿ ನೀನು ಭಾಷಣಮಾಡುತ್ತಾ "'ಅಸ್ಪೃಶ್ಯರನ್ನು ಮುಟ್ಟಲೇ ಬಾರದು. ಒಂದು ವೇಳೆ ಅಂಥವರ ಸ್ಪರ್ಶವಾದವನು ಪ್ರಾಯಶ್ಚಿತ್ತ ಹೋಮ ದಾನ ದಕ್ಷಿಣೆ ಮುಂತಾದ ಕರ್ಮಗಳಿಂದ ಶುದ್ಧೀಕರಿಸಿಕೊಳ್ಳದಿದ್ದರೆ ಅವನ ಏಳು ತಲೇ ವರೇಗಿನ ಪಿತೃಗಳೆಲ್ಲ ನರಕಕ್ಕೆ ಇಳಿಯುತ್ತಾರೆ" ಅಂತ ಶಾಸ್ತ್ರಾಧಾರಕೊಟ್ಟು ಹೇಳಿದಿಯಲ್ಲ?

ದೀಕ್ಷಿತ:— ಅದು ಯಾರಿಗೆ ಹೇಳಿದ್ದೂಂತೀ? ನಿನಗಲ್ಲ.

ಕಿಟ್ಟು:—ನನಗಲ್ಲವೆ?

ದೀಕ್ಷಿತ:— ಅಲ್ಲಾ, ಅಲ್ಲಾ, ಅಲ್ಲಾ!

ಕಿಟ್ಟು: - ಹಾಗಾದರೆ ನಮ್ಮ ಕೈಯಲ್ಲಿ ಹೇಳೋದಕ್ಕೊಂದು ಧರ್ಮ, ಆಚರಿಸೋದಕ್ಕೊಂದು ಧರ್ಮ ಅಂತ ಉಂಟಾ?

ದೀಕ್ಷಿತ:— ಅದೆಲ್ಲಾ ಅಧಿಕ ಪ್ರಸಂಗ ನಿನಗೆ ಬ್ಯಾಡಾ! ನೀನು ಸಂಜೆಗೆ ಬಂದವ ಪಾಠ ಗಟ್ಟಿ ಮಾಡ್ತಾ ಕೂತಿರೂ! ಚೆನ್ನಾಗಿ ಕಲ್ತುಕೊಂಡು ಶಾಲೀಗೆ ನಡೀ, ಒಂದನೇ ನಂಬರ್ ಹೊಡಿ! ಇನ್ನೆಲ್ಲಾದ್ರೂ ವ ಉಂಡಾಡಿಗಳಂತೆ ಹೊತ್ತುಗೇಡಿಯಾಗಿ ಅಂಥಾ ಸಭೆಗಳಲ್ಲಿ ತಲೆಹಾಕೀಯೋ, ಹ್ಞೂಂ, ಜಾಗ್ರತೆ!

'ವಿಚಾರ ಪ್ರಿಯ

---

**ಗೆಳೆಯರ ತಂಡದ ಸದಸ್ಯರಾಗುವವರು ಅಂತರಂಗದ ಕೆಳಗಿನ ಕೂಪನಿನಲ್ಲಿ ಬರೆಯಬೇಕು.**

## ಗೆಳೆಯರ ತಂಡದ ಸದಸ್ಯತನದ ಪತ್ರ.

ನಾನು 'ಗೆಳೆಯರ ತಂಡ'ಕ್ಕೆ ಸೇರಲಿಚ್ಛಿಸುತ್ತೇನೆ. ಆ ಬಗ್ಗೆ ಸದಸ್ಯತನದ ಆರು ತಿಂಗಳ ವರ್ಗಣಿಯಾದ ನಾಲ್ಕಾಣೆಯನ್ನು ಕಳುಹಿಸಿರುತ್ತೇನೆ.

ಹೆಸರು. . . . . . . . . . . . . . . . . . . . .

ವಿಳಾಸ. . . . . . . . . . . . . . . . . . . . .

ಉದ್ಯೋಗ. . . . . . . . . . . . . . . . . . . .

ಸಹಿ. . . . . . . . . . . . . . . . . . . . . .




ಗಾಂಧಿಯವರಿಗೊಬ್ಬಳು ಮಹಿಳೆ ಪತ್ರ ಬರೆದಿದ್ದಾಳೆ. 'ಮಹಾತ್ಮರೇ! ಲೋಕದಲ್ಲೆಲ್ಲಾ ಸ್ತ್ರೀಯರನ್ನು ಸೈನಿಕರಾಗಿ ಸೇರಿಸಿಕೊಳ್ಳ ಹತ್ತಿದ್ದಾರಲ್ಲಾ–ನೀವೇಕೆ ಮಹಿಳೆಯರಲ್ಲಿ ಅಹಿಂಸಾತ್ಮಕ ಪ್ರಚಾರ ಮಾಡಲು ಹಿಂದುಸ್ಥಾನವನ್ನೊಮ್ಮೆ ಸಂಚರಿಸುವದಿಲ್ಲ?' ಎಂದವಳ ಪ್ರಶ್ನೆ.

೦೦೦

'ನನ್ನ ಸಂಚಾರದ ದಿನಗಳು ಕಳೆದು ಹೋದುವಮ್ಮ!" ಎಂದು ಗಾಂಧಿಯವರ ಉತ್ತರ.

೦೦೦

ಹೋದ ಕೈಸರನಿನ್ನೊಮ್ಮೆ ಜರ್ಮನಿಯ ಚಕ್ರವರ್ತಿಯಾಗಿ ಬಂದರೂ ಬರಬಹುದು; ಆದರೆ ಹೋದ ದಿನವೆಂದಿಗೂ ತಿರುಗಿಬರಲಾರದು.

೦೦೦

ಹೋದ ದಿನಗಳು ಬಾರದಿದ್ದರೂ ಚಿಂತೆಯಿಲ್ಲ. ಬರುವ ದಿನಗಳೊಟ್ಟಿಗಾದರೂ ಮಹಾತ್ಮರೊಮ್ಮೆ ಹಿಂದುಸ್ಥಾನದ ಮೂಲೆ ಮೂಲೆಗಳಿಗೆ ಬರಬಹುದಲ್ಲ.

೦೦೦

'ಸ್ತ್ರೀಯರಲ್ಲಿ ಜಾಗ್ರತಿ ಹುಟ್ಟಿಸಲು ಪುರುಷರು ಬೇಕಾಗಿಲ್ಲ. ಸ್ತ್ರೀಯೊಬ್ಬಳವತರಿಸಿ ನನ್ನ ನಿರೀಕ್ಷೆಗೂ ಮಿಗಿಲಾಗಿ ಅಹಿಂಸಾ ಸ್ಥಾಪನಾ ಕಾರ್ಯವನ್ನು ಸಾಧಿಸಬಹುದು' ಎನ್ನುತ್ತಾರೆ ಗಾಂಧಿಯವರು.

೦೦೦

ಪತ್ರ ಬರೆದ ಈ ಮಹಿಳೆಯೇ ಅಂತಹ ಮಹಾ ಅವತಾರವೆಂದೇಕೆ ಭಾವಿಸಬಾರದು? ಗಾಂಧಿಯವರನ್ನು ಈ ರೀತಿ ಕಾರ್ಯಕ್ಕೆ ಕರೆದುದೇ ಅವಳ ಪ್ರಥಮ ಮಹಾಕಾರ್ಯವೆಂದೇಕೆ ತಿಳಿದುಕೊಳ್ಳಬಾರದು?

———

ಜಾತೀಯ ಐಕ್ಯತೆಗಾಗಿ ಗಾಂಧಿಯವರು ಜಿನ್ನರೊಡನೆ ಪತ್ರವ್ಯವಹಾರ ನಡೆಸಿದ್ದರಷ್ಟೆ. ಗಾಂಧಿಜೀಯವರು ತನ್ನ ಪತ್ರದಲ್ಲಿ 'ಶ್ರೀ. ಜಿನ್ನರಿಗೆ' ಎಂದು ಸಂಬೋಧಿಸಿದರಂತೆ.

೦೦೦

ಸಂಧಾನದ ಮಾತುಕತೆಗಳಿಗೆಲ್ಲ "ಇತಿ ಶ್ರೀ" ಕೊಡುವವರು ಜಿನ್ನರು. ಆದ್ದರಿಂದಲೇ ಆ 'ಶ್ರೀ'ಯನ್ನು ಜಿನ್ನರ ಹೆಸರಿನ ಮುಂಭಾಗದಲ್ಲಿ ಸೇರಿಸಿಬಿಟ್ಟರೋ ಹೇಗೆ?

೦೦೦

ಅಥವಾ ಆ 'ಶ್ರೀ' ಸೇರಿರುವದರಿಂದಲೇ ಜಿನ್ನರು ಬಡವರನ್ನು ಲಕ್ಷಿಸದೆ ಸಂಧಾನಕೆಲ್ಲಾ ಇತಿ ಶ್ರೀ ಜಿನ್ನರಾದರೋ?

೦೦೦

ಅಂತೂ 'ಮಿಸ್ಟರ್ ಜಿನ್ನ'ಎಂದು ಕರೆಯದೆ 'ಶ್ರೀ ಜಿನ್ನ'ರೆಂದು ಸಂಬೋಧಿಸಿದಿರೇಕೆ?' ಎಂದು ಹಲವರು ಗಾಂಧಿಯವರನ್ನು ಪ್ರಶ್ನಿಸುತ್ತಿದ್ದಾರೆ.

೦೦೦

ಗಾಂಧಿಯವರನ್ನು ಮಹಾತ್ಮಾ ಗಾಂಧಿಯೆಂದು ಕರೆಯುವದೇಕೆ? ಶ್ರೀ ಗಾಂಧಿಯವರೆಂದೇಕೆ ಕರೆಯಬಾರದು- ಎಂದು ಈ ಮೊದಲು ಹಲವರು ಕೇಳಿದ್ದರು.

೦೦೦

ಮಿಸ್ಟರ್ ಇರಲಿ, ಶ್ರೀ ಇರಲಿ- ಜಿನ್ನರು ಜಿನ್ನರೇ; ಗಾಂಧಿಯವರು ಗಾಂಧಿಯವರೇ.

'ಶ್ರೀ' ಅಕ್ಷರವನ್ನು ಹೆಸರಿನ ಮಧ್ಯದಲ್ಲಿಸೇರಿಸುತ್ತಿದ್ದರೆ 'ಶ್ರಿಜೀನ್ನ' ಆಗಿ 'ಜಿನ್ನ'ರನ್ನು ಕೆಡಿಸಿದ ಅಪಕೀರ್ತಿ ಗಾಂಧಿಯವರಿಗೆ ಬರಲೇಬೇಕಿತ್ತು. ಈಗ ಹಾಗೇನೂ ಇಲ್ಲ.

೦೦೦

ಮಿಸ್ಟರ್ ಜಿನ್ನರೀಗ 'ಬಾದಶಹ ಜಿನ್ನಾ' ಪದವಿಗೇರಲು ಪ್ರಯತ್ನಿಸುತ್ತಿದ್ದಾರೆ. ಹೀಗೆ ಗಾಂಧಿಯವರ 'ಶ್ರೀ' ಮತ್ತು ತಮ್ಮ 'ಮಿಸ್ಟರ್' ಎರಡನ್ನೂ ದಾಟಿ ಜಿನ್ನರು ಮುಂದೆ ಹೋದಾಗ ಈ ವಾದ ಮಾಡಿದವರೇನನ್ನುವರು?

———

'ಮುಖ್ಯ ಮಂತ್ರಿ ಚೆಂಬರ್ಲೆನರು ಸರ್ವಾಧಿಕಾರಿಯಂತೆ ವರ್ತಿಸುತ್ತಿದ್ದಾರೆ' ಎಂದು ಲ್ಯೊಯಡ್ ಜೋರ್ಜರ ಆರೋಪ.

೦೦೦

ಹೀಗೆ ವಿರೋಧಿಗಳು ತನ್ನನ್ನು ಸಂಬೋಧಿಸುವದನ್ನು ನಿಲ್ಲಿಸುವ ಅಧಿಕಾರವೊಂದನ್ನು ಬಿಟ್ಟಿರುವದರಿಂದ 'ಸರ್ವಾಧಿಕಾರಿ'ಯಾಗಿದ್ದಾರೆಂಬುದು ಸುಳ್ಳು!

೦೦೦

ನಮ್ಮಲ್ಲಿ ಗೌಡನಮನೆ ಹುಡುಗನನ್ನೂ ಗೌಡನೆನ್ನುವ ವಾಡಿಕೆಯಿದೆ. ಸರ್ವಾಧಿಕಾರಿಗಳ ಬಳಗಿನವರನ್ನೂ ಸರ್ವಾಧಿಕಾರಿಗಳೆಂದು ಕರೆದು ಲ್ಯೊಯಡ್‌ಜೋರ್ಜರು ನಮ್ಮ ಅನುಕರಣೆಮಾಡಿದ್ದಾರೆ.

—ದೂಮ.

# ಪಾರ್ಲಿಮೆಂಟರಿ ಬೋರ್ಡಿನ

# •ಃ ಲೆಖ್ಖಪತ್ರಗಳು ಃ•

## ಡಾಕ್ಟರ್ ವಿಠಲ ಶೆಟ್ಟರ ಪತ್ರ-

### ಲೆಖ್ಖ ಪರಿಶೋಧನೆಯಾಗುತ್ತಿದೆ - ಸದ್ಯದಲ್ಲಿಯೇ ಪ್ರಕಟವಾಗಲಿದೆ.

ಅಂತರಂಗದ ಸಂಪಾದಕರಿಗೆ:—

ನಿಮ್ಮ ತಾ. ೩೦-೧೦-೩೮ನೆ ಸಂಚಿಕೆಯಲ್ಲಿ ಪಾರ್ಲಿಮೆಂಟರಿ ಬೋರ್ಡಿನ ಲೆಖ್ಖಾಚಾರದ ವಿಷಯ, "... ..ಡಾ. ವಿಟ್ಠಲ ಶೆಟ್ಟರು, ಪೂರಾ ಜನರಲ್ ಸೆಕ್ರೆಟರಿಯರಿಗೆ ಗೊತ್ತು, ನನಗದರ ಅರಿವೇ ಇಲ್ಲ, ಎನ್ನುವರು." ಎಂಬುದಾಗಿ ಬರೆದಿರುವುದನ್ನು ನೋಡಿದೆನು.

೧೯೩೭ನೇ ನವಂಬರ ತಿಂಗಳಲ್ಲಿ ಆಗ ಜಿಲ್ಲಾ ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಯರಾಗಿದ್ದ ಶ್ರೀ. ಹಿ. ರಾಮರಾಯ ಮಲ್ಯರಿಗೆ ಪಾರ್ಲಿಮೆಂಟರಿ ಬೋರ್ಡಿನ ಲೆಕ್ಕಗಳು ಸಿದ್ಧವಾಗಿರುತ್ತವೆಂದೂ ಇವನ್ನು ಪ್ರಕಟಿಸುವ ವಿಷಯದಲ್ಲಿ ಜಿಲ್ಲಾ ಕಮಿಟಿಯ ಅನುಜ್ಞೆಗಳು ಬೇಕೆಂದೂ ನಾನೇ ಒಂದು ಪತ್ರ ಬರೆದು ಕಳುಹಿಸಿದ್ದೆ. ಆ ಪತ್ರಕ್ಕೆ ನನಗೆ ಜಿಲ್ಲಾ ಕಮಿಟಿಯಿಂದ ಉತ್ತರವು ಈ ತನಕ ಬಂದಿಲ್ಲ.

ಪಾರ್ಲಿಮೆಂಟರಿ ಬೋರ್ಡಿನ ಲೆಖ್ಖವನ್ನು ಅನಂತರ ತಾ. ೯-೧೦-೧೯೩೮ರಲ್ಲಿ ಸೇರಿದ ಜಿಲ್ಲಾ ಕಾಂಗ್ರೆಸ್ ಕಮಿಟಿಯ ಸಭೆಯ ಮುಂದೆ ಇರಿಸಲಾಗಿದೆ. ಅವುಗಳ ಕುರಿತು ಈ ಸಭೆಯಲ್ಲಿ ಚರ್ಚಿಸಿ ಈಗ ಅವು ಲೆಖ್ಖಪರಿಶೋಧಕರಿಂದ ಪರಿಶೋಧಿಸಲ್ಪಡುತ್ತಿವೆ.

ಈ ಲೆಖ್ಖದ "ಅರಿವೇ ಇಲ್ಲ" ವೆಂದು ನಾನು ಹೇಳಿದ್ದಿಲ್ಲ. ಆದುದರಿಂದ ನಿಮ್ಮ ಪತ್ರಿಕೆಯಲ್ಲಿ ಪ್ರಕಟಿಸಲ್ಪಟ್ಟ ಈ ಹೇಳಿಕೆ ಸರಿಯಲ್ಲವೆಂದು ನಿಮಗೆ ತಿಳಿಸಲು ಅಪೇಕ್ಷಿಸುತ್ತೇನೆ.

(ಸಹಿ) **ವಿಠಲ ಶೆಟ್ಟಿ.**

[ದಕ್ಷಿಣ ಕನ್ನಡ ಜಿಲ್ಲಾ ಕಾಂಗ್ರೆಸ್ ಪಾರ್ಲಿಮೆಂಟರಿ ಬೋರ್ಡು ಕಳೆದ ಎಸೆಂಬ್ಲಿ ಚುನಾವಣೆಗಾಗಿ ಸ್ಥಾಪಿಸಲ್ಪಟ್ಟು, ಅದರ ಚಟುವಟಿಕೆಗಳನ್ನು ಯಶಸ್ವಿಯಾಗಿ ಪೂರೈಸಿದರೂ, ಅದರ ಲೆಖ್ಖಪತ್ರಗಳು ಕ್ಲಪ್ತಕಾಲದಲ್ಲಿಪ್ರಕಟಿಸಲ್ಪಡದಿದ್ದುದರಿಂದ ಎಲ್ಲೆಡೆಗಳಲ್ಲಿಯೂ ಆ ಕುರಿತು ವಿಮರ್ಶೆಯು ತಲೆದೋರಿತ್ತು. ಲೆಖ್ಖಪತ್ರಗಳ ಕುರಿತು ಜಿಲ್ಲೆಯ ಕೆಲವು ಪತ್ರಿಕೆಗಳಲ್ಲಿ ಕೆಲವು ಲೇಖನಗಳೂ ಪ್ರಕಟವಾಗಿದ್ದುವು. ಇಷ್ಟಲ್ಲದೆ ೧೯೩೭ರ ಜಿಲ್ಲಾ ಕಾಂಗ್ರೆಸ್ ಕಮಿಟಿಯ ಒಂದೆರಡು ಸಭೆಗಳಲ್ಲಿ ಪಾರ್ಲಿಮೆಂಟರಿ ಬೋರ್ಡಿನವರಿಗೆ ಲೆಖ್ಖಪತ್ರಗಳನ್ನೊಪ್ಪಿಸುವರೆ ಎಚ್ಚರಿಕೆ ಸಹಿತ ಸಮಯವು ಕೊಡಲ್ಪಟ್ಟಿತಲ್ಲದೆ ಉಡುಪಿಯ ಮೋಡರ್ನ್ ಹಯರೆಲಿಮೆಂಟರಿ ಶಾಲೆಯಲ್ಲಿ ಜರಗಿದ ಜಿಲ್ಲಾ ಕಾಂ. ಕಮಿಟಿಯ ಮಹಾಸಭೆಯಲ್ಲಿ ಒಂದು ತಿಂಗಳ ಅವಧಿಯೊಳಗೆ ಲೆಖ್ಖಪತ್ರಗಳನ್ನು ಒಪ್ಪಿಸದಿದ್ದರೆ ಅವರ ಮೇಲೆ ನಿಯಮ ಜಾರಿಮಾಡಬೇಕೆಂಬ ಠರಾವಾಗಿದೆಯೆಂದೂ ನಮ್ಮ ತಿಳುವಳಿಕೆಗೆ ಬಂದಿದೆ. ಲೆಖ್ಖಪತ್ರಗಳನ್ನು ಪ್ರಕಟಿಸಲು ವಿಳಂಬಮಾಡಿರುವುದರಿಂದ ತಾ. ೩೦-೧೦-೩೮ರ "ಅಂತರಂಗ"ದಲ್ಲಿ ನಮ್ಮ "ಜಿಲ್ಲಾ ಸಂಚಾರಿ"ಗಳು ಈ ಕುರಿತು ಒಂದು ವಿಮರ್ಶಾತ್ಮಕ ಸೂಚನೆಯನ್ನು ಬರೆದಿದ್ದರು.

ಮಾನ್ಯರಾದ ಡಾ| ಕೆ. ವಿಠಲ ಶೆಟ್ಟರು ೧೯೩೭ನೆ ನವಂಬರ ತಿಂಗಳಲ್ಲಿ ಪಾರ್ಲಿಮೆಂಟರಿ ಬೋರ್ಡಿನ ಲೆಖ್ಖಪತ್ರಗಳು ಸಿದ್ಧವಾಗಿವೆಯೆಂದು, ಮತ್ತು ಅವುಗಳನ್ನು ಪ್ರಕಟಿಸಲು ಅನುಜ್ಞೆಕೊಡಬೇಕೆಂದು ಕೇಳಿದರೂ ಕಮಿಟಿಯು ಏನನ್ನೂ ಮಾಡದೆ ಸುಮ್ಮನೆ ಕುಳಿತಿರುವುದೆಂದು ಡಾಕ್ಟರ್ ಶೆಟ್ಟರು ಹೇಳಿದ್ದಾರೆ. ಜಿಲ್ಲಾ ಕಮಿಟಿಯು ಅವುಗಳನ್ನು ಪ್ರಕಟಿಸಲು ಹಿಂಜರಿಯಿತೇಕೆಂದು ಸಂಬಂಧಪಟ್ಟವರು ಜನತೆಗೆ ತಿಳಿಸುವದುಆವಶ್ಯವಾಗಿದೆ.

ಹೇಗಿದ್ದರೂ ಬಹಳ ಚರ್ಚಾತ್ಮಕ ಪ್ರಶ್ನೆಯಾದ ಈ ಲೆಖ್ಖಪತ್ರಗಳನ್ನು ಈಗಿನ ಜಿಲ್ಲಾ ಕಾಂಗ್ರೆಸ್ ಕಮಿಟಿಯವರು ಪರಿಶೋಧಿಸುವ ವ್ಯವಸ್ಥೆ ಮಾಡಿರುವುದಕ್ಕಾಗಿ ನಾವು ಕಮಿಟಿಯನ್ನು ಹಾರ್ದಿಕವಾಗಿ ಅಭಿವಂದಿಸುತ್ತೇವೆ ಅಲ್ಲದೆ ಡಾಕ್ಟರ್ ಶೆಟ್ಟರು ಈ ಕುರಿತು ನಿಜ ಸಂಗತಿಯನ್ನು ತಿಳಿಸಿರುವುದಕ್ಕಾಗಿ ಅವರಿಗೆ ನಮ್ಮ ಅಭಿವಂದನೆಗಳು.

ಪಾರ್ಲಿಮೆಂಟರಿ ಬೋರ್ಡಿನ ಲೆಖ್ಖಪತ್ರಗಳು ಪರಿಶೋಧನೆಯಾದ ಬಳಿಕ ಅವುಗಳನ್ನು ಪ್ರಕಟಿಸಿದರೆ ಕುತೂಹಲಿಗಳಿಗೆ ಸಮಾಧಾನವಾಗಬಹುದೆಂದು ನಮ್ಮ ಅಭಿಪ್ರಾಯ.

—ಸಂ. ಅಂ.]

# ಅಂತರಂಗ

**ಆದಿತ್ಯವಾರ, ನವಂಬರ ೧೩, ೧೯೩೮.**

## ಪೆಲೆಸ್ತೈನ್ ಯುದ್ಧ

ಬ್ರಿಟನಿನ ಸಾಮ್ರಾಜ್ಯಶಾಹೀ ಧೋರಣೆಯಿಂದಾಗಿ ಪೆಲೆಸ್ತೈನನ್ನು ಗುಂಡಿನಬಲದಿಂದ ಪೂರ್ಣವಾಗಿ ಕೈವಶಪಡಿಸುವ ಯತ್ನವು ಬ್ರಿಟಿಷರಿಂದ ಮಾಡಲ್ಪಡುತ್ತಿದೆ. ಹೆರ್ ಹಿಟ್ಲರನು ಅರಬರಿಗೆ ಪೂರ್ಣ ಬೆಂಬಲವೀಯುತ್ತಿರುವುದಲ್ಲದೆ ಅವರು ಕೊಲ್ಲಬಹುದಾದ ಪ್ರತಿಯೊಬ್ಬ ಜೂದನ ಮರಣಕ್ಕಾಗಿ ಐದು ಪೌಂಡುಗಳನ್ನು ಜರ್ಮನಿಯು ಕೊಡುತ್ತಿದೆಯೆಂದು "ಟ್ಯಾಮ್ಸ್" ಪತ್ರಿಕೆ ಹೇಳುತ್ತಿದೆ. ಬ್ರಿಟಿಷರಿಗೆ ಪೆಲೆಸ್ತೈನನ್ನು ಹತೋಟಿಗೆ ತರುವುದು ಅಸಾಧ್ಯಕೆಲಸವಾಗಿ ಪರಿಣಮಿಸಿದೆ. ಜೂದರಿಗೆ ಬೇರೆ ವಸಾಹತನ್ನು ಕೊಡುವ ಏರ್ಪಾಡು ಮಾಡದಿದ್ದರೆ ಅವರೆಲ್ಲರೂ ಹಿಟ್ಲರನ ಬೋಂಬುಗಳಿಗೆ ತುತ್ತಾಗುವರೆಂಬುದರಲ್ಲಿ ನಿರ್ವಿವಾದ. "ವಸಾಹತುಗಳನ್ನು ಹೆಚ್ಚಿಸಿಕೊಳ್ಳುವ ದುರಾಶೆಯು ಸರ್ವಾಧಿಕಾರಿಗಳಿಗಿಲ್ಲ" ವೆನ್ನುವ ಬ್ರಿಟಿಷ್ ಪ್ರಧಾನ ಚೇಂಬರ್ಲೆನರ ಹುಚ್ಚು ಹೇಳಿಕೆಯನ್ನು ನಿರಾಧಾರವೆಂದು ವ್ಯಕ್ತಗೊಳಿಸಲು ಇದೊಂದೇ ನಿದರ್ಶನವು ಸಾಕಾಗಿದೆ.

---

## ಮ್ಯೂನಿಕ್ ಒಪ್ಪಂದದ ಪರಿಣಾಮ.

ಜಗತ್ತಿನ ರಾಜಕಾರಣದ ಚರಿತ್ರೆಯ ಲಜ್ಜಾವಹ ವಿಭಾಗವಾದ ಮ್ಯೂನಿಕ್ ಒಪ್ಪಂದದಿಂದಾಗಿ ಚೆಕೊಸ್ಲೊವೇಕಿಯದ ಮೂರರಲ್ಲೊಂದು ಉಪಯುಕ್ತ ಭಾಗವು ಹರಿದು ಹಂಚಿಹಾಕಲ್ಪಟ್ಟಿತು. ಫ್ರಾನ್ಸ ಮತ್ತು ಬ್ರಿಟನುಗಳು ಇಟೆಲಿಯ ರಾಜನನ್ನು ಎಬಿಸೀನಿಯದ ಚಕ್ರವರ್ತಿಯೆಂದು ಮಾನ್ಯ ಮಾಡಿದುವು. ಇದರಿಂದಾಗಿ ಜನಾಂಗ ಸಭೆಯ ಗೋರಿಯ ಮೇಲೆ ಮತ್ತಷ್ಟು ಮಣ್ಣನ್ನು ಹಾಕಿದಂತಾಯಿತು. ಬ್ರಿಟಿಷ್ ಪ್ರಧಾನ ಚೇಂಬರ್ಲೆನರ ಹುಚ್ಚು ಧೋರಣೆಯಿಂದಾಗಿ ಸ್ಪೈನ್ ಸರಕಾರವು ಮೂಲೆಪಾಲಾಗಿ ಸರ್ವಾಧಿಕಾರಿಗಳ ಕೈಗೊಂಬೆಯಾದ ಜನರಲ್ ಫ್ರೆಂಕೋನಿಗೆ ತುಂಬಾ ಸಹಾಯವು ಸಿಕ್ಕಿದಂತಾಯಿತು. ಹಾನಿಕಾರಕ ಆಂಗ್ಲೋ-ಇಟಾಲಿಯನ್ ಒಪ್ಪಂದವು ಜಾರಿಗೆ ಬಂದಂತಾಯಿತು. ಇನ್ನುಳಿದಿರುವುದೆಂದರೆ ಜಗತ್ತನ್ನು ಅವ್ಯವಸ್ಥೆಯಲ್ಲಿ ಮುಳುಗಿಸುವ ಇನ್ನೊಂದು ಯುದ್ಧ ಪ್ರಾರಂಭವಾಗುವುದು ಮಾತ್ರ.

---

## ಕಾಂಗ್ರೆಸ್ ಮತ್ತು ಸಂಸ್ಥಾನಗಳು.

'ಈ ಧ್ವಜವು ಪ್ರಭುತ್ವದವರಿಗೆ ವಿರೋಧವಾಗಿರುವುದೆಂದು ಎಣಿಸಬಾರದು' ಎಂದು ಸರ್ದಾರ್ ಪಟೇಲರು ಬರೋಡಾ ಸಂಸ್ಥಾನದ ಪ್ರಜಾ ಪರಿಷತ್ತಿನ ಕಾಲದಲ್ಲಿ ರಾಷ್ಟ್ರ ಧ್ವಜಾರೋಹಣ ಮಾಡುವಾಗ ಹೇಳಿದರು. ಪ್ರಭುತ್ವದ ವಿಧಾನಗಳಿಗೆ ವಿರೋಧವನ್ನು ತೋರಿಸದಿದ್ದರೆ ಜವಾಬ್ದಾರೀ ಸರಕಾರವು ತನ್ನಷ್ಟಕ್ಕೆ ಬರುವುದೋ ಎಂಬುದು ವಿಚಾರಾಸ್ಪದವಾಗಿದೆ. ಸರ್ದಾರರ ಸೂಚನೆಯಿಂದ ತಿಳಿಯುವ ಏಕಮಾತ್ರ ವಿಚಾರವೆಂದರೆ ಕಾಂಗ್ರೆಸ್ ಧುರೀಣರು ವೈಯಕ್ತಿಕವಾಗಿ ಚಳವಳ ನಡೆಸಬಹುದಾದರೂ ಪ್ರಭುತ್ವದ ಸಹಾನುಭೂತಿಯನ್ನು ಕಳೆದುಕೊಳ್ಳಬಾರದೆಂದಾಗಿದೆ. ಈ ಧೋರಣೆಯನ್ನನುಸರಿಸಿ ಜವಾಬ್ದಾರೀ ಸರಕಾರವನ್ನು ಹೊಂದಬೇಕೆಂಬ ಸರ್ದಾರರ ಬುದ್ಧಿವಾದವು ಹರಿಪುರದ ಸಂಸ್ಥಾನಗಳ ನಿರ್ಣಯದಷ್ಟೇ ಅಸ್ಪಷ್ಟವಾಗಿದೆ.

---

## ಅಂತರಂಗದ ಸ್ಪರ್ಧೆಯನ್ನು ಬಿಡಿಸುವವರಿಗೆ—

ಅಂತರಂಗ ಸ್ಪರ್ಧೆಯಲ್ಲಿ ಈ ಕೆಳಗಿನ ಶಬ್ದಗಳಲ್ಲಿ ಕೆಲವನ್ನು ಉಪಯೋಗಿಸಿದರೆ ಸರಿಯಾದ ಉತ್ತರವು ಸಿಗುತ್ತದೆ:—

ವಿನೋದಮಯ, ಆನಂದಮಯ, ಕದನ, ಕವನ, ಆರಾಮ, ವಿರಾಮ, ದರಹಸಿತ, ಮಧುರ, ನವೀನ, ಬಿಸಿ, ಹಸಿ, ಸಿಹಿ, ಸುಭಾಷಚಂದ್ರ, ದ್ರವಿಡ, ಗಡಾ, ಷಡಾಗಮ, ನೀರದೆ, ಶಾರದೆ, ಮಳೆನೀರು, ಜನ, ತರುಣ, ತಡಿ, ತಟ, ಧುರ, ಯಮ, ಜವ, ಪರಮ, ಗರುಡ, ಕರ, ವಧು, ರಣದ, ದಮನ,

---

# ಬ್ರಿಟಿಷ್ ರಾಜಮನೆತನ

## ಇಂಗ್ಲಿಷ್ ಚರಿತ್ರೆಯ

**ಮದುವೆಯಾಗದೆ ಮಡಿದ ರಾಜಕುಮ**
**ಮದುವೆ— .ಒಂದನೇ ಜಾಜ**
**ವ್ಯಭಿಚಾರ—ಇವೆಲ್ಲ ಇಂಗ್ಲಿ**

ಎಂಟನೆಯ ಎಡ್ವರ್ಡರು ಸಾಮ್ರಾಜ್ಯದ ಒಡೆತನದಿಂದ ದೂರ ಾದರು. ಆದರೆ ಇಂಗ್ಲಿಷ್ ಜನರು ಂಹಾಸನ ತ್ಯಾಗದ ಒಳಿಕವೂ ವರ ಕುರಿತು ಅಪಪ್ರಚಾರ

— ಕೊನೆಯ —
ಲೇಖಾಂಕ

ಾಡುವುದನ್ನು ನಿಲ್ಲಿಸಲಿಲ್ಲ. ಸರ ಾರವೇ ಮಹತ್ವದ ಅಪಪ್ರಚಾರ

ಸಿಂಹಾಸನ
ತ್ಯಾಗಮಾಡಿದಾಗ ತೆಗೆದ



ಎಂಟನೆಯ ಎಡ್ವರ್ಡರ
ಭಾವ ಚಿತ್ರ.

ವನ್ನು ನಡೆಸಿ ತನ್ನ ಶುಷ್ಕತೆಯನ್ನು ವ್ಯಕ್ತಪಡಿಸಿಕೊಂಡಿತು.

o o o

### ಆ ದೃಶ್ಯ!

ಜಗತ್ತಿಗೆ ಬ್ರಾಡ್ ಕಾಸ್ಟ ಭಾಷಣ ಮಾಡಿದ ಬಳಿಕ ವಿಂಡ್ಸರಿನಿಂದ ಅವರು ತೆರಳಿದ ದೃಶ್ಯವು ಎಂಥ ಹೃದಯವನ್ನೂ ಕರಗಿಸುವಂತಿದೆ. ತನ್ನ ದೇಶ, ತನ್ನ ಸಹೋದರರೇ ಮೊದಲಾದವರನ್ನು ಅವರು ಬಿಡಬೇಕಾಯಿತು. ಆದರೆ ತಾನು ಹಾಗೇಕೆ ಮಾಡುತ್ತಿದ್ದೆನೆಂಬುದನ್ನು ಜಗತ್ತಿಗೆ ತಿಳಿಸಿರುವೆನೆಂಬ ಸಮಾಧಾನವು ಅವರಿಗಿತ್ತು. ಪಾರ್ಲಿಮೆಂಟಿನಲ್ಲಿ ಒಬ್ಬರ ಬಳಿಕೊಬ್ಬರು ಎದ್ದು ನಿಂತು ಮಾಡಿದ ಆ ಭಾಷಣಗಳ ನೆನಹು ಅವರಿಗೆ ಬೇಸರವನ್ನುಂಟು ಮಾಡಿತ್ತು. 'ಫ್ಯೂರಿ' ಎಂಬ ಡಿಸ್ಟ್ರಾಯರಿನಲ್ಲಿ ಎಡ್ವರ್ಡರು ಬೊಲೋನಿಗೆ ತೆರಳಿದರು. ಎಂದಿನ ಜನರು, ಎಂದಿನ ಸಂಭ್ರಮ ಸ್ವಾಗತಗಳು ಅಂದಿರಲಿಲ್ಲ.

o o o

### ಧರ್ಮಾಧಿಕಾರಿಗಳ ಮೌಢ್ಯ!

ದಶಂಬರ ೧೩ರಂದು ಇಂಗ್ಲೆಂಡಿನ ಚರ್ಚುಗಳ ಪರವಾಗಿ ರಾಜ್ಯತ್ಯಾಗ ಮಾಡಿದ ಎಡ್ವರ್ಡರ ಸಲುವಾಗಿ ಸಹಾನುಭೂತಿಕರ ಭಾಷಣವೊಂದು ಮಾಡಲ್ಪಟ್ಟಿತು. ಆ ಭಾಷಣದಲ್ಲಿ- ಎಡ್ವರ್ಡರು ಕ್ರೈಸ್ತ ಧರ್ಮಕ್ಕೆ ಹಾಗೂ ನೀತಿಬಾಹಿರವಾದ ರೀತಿಯಲ್ಲಿ ವಿವಾಹವಾಗಲಿಚ್ಛಿಸಿದರು- ಎಂಬೊಂದು ಅರ್ಥರಹಿತ ವಾಕ್ಯವು ಸೇರಿಸಲ್ಪಟ್ಟಿತ್ತು. ಇದಕ್ಕಾಗಿ ಕೊನೆಗೆ ಆರ್ಚ್ ಬಿಷಪರು ರೇಡಿಯೋ ಭಾಷಣದಲ್ಲಿ ಕ್ಷಮಾಯಾಚನೆ ಮಾಡಿಕೊಂಡರು.

o o o

### 'ವಿಚಿತ್ರ ವಿವಾಹಗಳು'

ಡ್ಯೂಕ್ ಆಫ್ ವಿಂಡ್ಸರರ ಮೊದಲು ಇಂಗ್ಲೆಂಡಿನ ರಾಜರಾಜ್ಞಿಯರು ಯಾವ ವಿವಾಹ ಕ್ರಮವನ್ನು ಅನುಸರಿಸಿದರೆಂದು ನೋಡಿದರೆ ಎಡ್ವರ್ಡರು ಮಾಡಿರುವುದು ವಿಶೇಷವೆಂದು ಕಾಣಿಸುವುದಿಲ್ಲ. ವಿಕ್ಟೋರಿಯಾ ರಾಣಿಯು ತನ್ನ ಸ್ವೇಚ್ಛೆಯಂತೆ ರಾಜಕುಮಾರ ಆಲ್ಬರ್ಟನ್ನು ಮದುವೆಯಾದಳು

o o o

### ಒಂದನೆ ಜಾರ್ಜರ ಅನಾಚಾರ.

ಇತರರ ಒತ್ತಾಯದಂತೆ ಒಂದನೆಯ ಜಾರ್ಜರು ಹದಿನಾರು ವರುಷದ ಸೋಫಿಯಾ ಡೊರೋತಿಯಾ ಎಂಬಾಕೆಯನ್ನು ಮದುವೆಯಾಗಿ, ರಾಜತ್ವದ ಹೊರೆಯನ್ನು ಹೊರುವವರು ಪದ್ಧತಿಗಳ ಕ್ರೂರ ನಿಯಮಗಳನ್ನು ಹೇಗೆ ಪಾಲಿಸಬೇಕೆಂಬುದನ್ನು ಸ್ಪಷ್ಟಗೊಳಿಸಿದ್ದಾರೆ. ಹದಿನಾರನೆಯ ವಯಸ್ಸಿನಲ್ಲಿಯೇ ಒಂದನೆಯ ಜಾರ್ಜರು ನೆರೆಯದ ಚಿಕ್ಕ ತರುಣಿಯ ಮೇಲೆ ಅತ್ಯಾಚಾರ ನಡೆಸಿರುವುದಲ್ಲದೆ, ಅರಮನೆಯಲ್ಲಿ ನೂರಾರು ಜರ್ಮನ್ ತರುಣಿಯರೊಡನೆ ತನ್ನ ಎಳೆ ಪತ್ನಿಯೆದುರು ಸಂಭೋಗ ಸುಖವನ್ನು ಪಡೆದಿರುವ ಲಜ್ಜಾವಹ ವಿಚಾರವು ಇಂಗ್ಲಿಷ್

ಈಗಿ
ಪ್ರಾ
ಮತ್ತು
ರರ ಭ
ಪ್ರತ್ಯೇ
ಪ್ರಕ



ಎಡದಿಂದ
ಎಡ್ವರ್

# ತ ವಿವಾಹ ಕಾಯಿದೆ

# ಪ್ರವಕ ದೃಶ್ಯಗಳು

**ಸಮೀಪ ಬಂಧುಗಳೊಡನೆ**
**- ರಾಜಮನೆತನದಲ್ಲಿ**
**ಯಿದೆಯಿಂದಾಗಿ!**

ಚರಿತ್ರೆಗೆ ಇನ್ನೂ ಕಳಂಕಪ್ರಾಯವಾಗಿದೆ. ಇಂಗ್ಲೆಂಡಿನ ರಾಜರ ವಿವಾಹ ಕಾಯಿದೆಯು ಅತ್ಯಂತ ಹೇಯವಾದುದೆಂಬುದರಲ್ಲಿ ನಿರ್ವಿವಾದ. ಇಂಗ್ಲೆಂಡಿನ ರಾಜರ ವೈವಾಹಿಕ ಚರಿತ್ರೆಯನ್ನು ನೋಡುವುದಿದ್ದರೆ ಅದರಷ್ಟು ಕೊಳಕು ಚರಿತ್ರೆಯು ಬೇರಾವುದಿಲ್ಲವೆನ್ನಬಹುದು.

ನಾಲ್ಕನೆಯ ಜಾರ್ಜರು ಈ ಕಾಯಿದೆಯಿಂದಾಗಿ ವೈವಾಹಿಕ ಜೀವನದ ಸುಖವನ್ನು ಒಬ್ಬ ಖಾಸಗಿ ಸ್ತ್ರೀಯೊಡನೆ ಪಡಯಬೇಕಾಯಿತು. ಅವರ ತಮ್ಮ ಡ್ಯೂಕ್ ಆಫ್ ಕ್ಲೇರೆನ್ಸರು, ಸಿಕ್ಕಿದ ಇಂಗ್ಲಿಷ್ ತರುಣಿಯರನ್ನು ಪ್ರೇಮಿಸಿ ಬ್ರಿಟಿಷ್ ವೈವಾಹಿಕ ಕಾಯಿದೆಯ ಶಿಥಿಲತೆಯನ್ನು ಸ್ಪಷ್ಟಪಡಿಸಿದ್ದರು. ಒಟ್ಟಿನ ಮೇಲಸ್ನುವುದಿದ್ದರೆ ಇಂಗ್ಲಿಷ್ ರಾಜರಿಗೆ ವೈವಾಹಿಕ ಸ್ವಾತಂತ್ರ್ಯವು ಕೂಡಾ ಇಲ್ಲವೆಂಬುದು ಒಂದನೆಯ ಜಾರ್ಜರ ಬಳಿಕ ಆಳಿದ ರಾಜರ ಕೌಟುಂಬಿಕ ಚರಿತ್ರೆಯನ್ನು ನೋಡಿದರೆ ವ್ಯಕ್ತವಾಗುತ್ತದೆ.

● ○ ○

**ಸೋಫಿಯಾ ರಾಣಿಯ ನಿಗೂಢ ಪ್ರಣಯ**

ಇಂಗ್ಲಿಷ್ ರಾಜರಾಣಿಯರು ವಿವಾಹ ಸ್ವಾತಂತ್ರ್ಯವಿಲ್ಲದಿದ್ದುದರಿಂದ ಎಷ್ಟೊಂದು ಹೀನವಾದ ಪ್ರಣಯಜೀವನವನ್ನು ನಡೆಸಿರುವರೆಂಬುದಕ್ಕೆ ಬಹಳ ಸುಂದರಿಯಾದ ಸೋಫಿಯಾ ಎಂಬ ರಾಜಕುಮಾರಿಯ ಕಥೆಯೇ ಸಾಕ್ಷಿಯಾಗಿದೆ.

ಪ್ರಿನ್ಸೆಸ್ ಸೋಫಿಯಾ ಎಂಬ ತರುಣಿ ತನ್ನಿಂದ ಮೂವತ್ತೆರಡು ವರುಷ ದೊಡ್ಡವನೊಬ್ಬನನ್ನು ಗುಟ್ಟಿನಲ್ಲಿ ಮದುವೆಯಾದಳು. ಮದುವೆಯಾಗುವ ಮೊದಲೇ ಅವರಿಗೊಂದು ಮಗು ಹುಟ್ಟಿತು. ಆಕೆಯ ಜೀವನವು ಕರುಣಾಜನಕವಾಗಿದೆ. ಕಾಯಿದೆಯ ಕ್ರೂರ ನಿಯಮಗಳಿಂದಾಗಿ ಉಂಟಾದ ಬೇಸರದಿಂದ ಆಕೆಯು ಕೊನೆಗೆ ಕುರುಡಿಯಾದಳು. ಸೋಫಿಯಳ ಜೀವನವು ದುಃಖಪೂರಿತವಾದುದೆಂದು ಬೇರೆ ಹೇಳಬೇಕಾಗಿಲ್ಲ. ಹುಚ್ಚನಾಗಿದ್ದ ಮೂರನೇ ಜಾರ್ಜನ ಮಗಳಾದ ಎಮೇಲಿಯಾ ಎಂಬಾಕೆ ತನಗೆ ಪ್ರಿಯನಾದವನನ್ನು ಮದುವೆಯಾಗಲು ಎಡೆಯಿಲ್ಲದಿರುವುದಕ್ಕಾಗಿ ಮರುಗಿ ಹೃದ್ರೋಗದಿಂದ ಸತ್ತಳು. ಆವಳ ಪ್ರಿಯನಿಗಾಗಿ ಮಾಡಿಟ್ಟ ಮಮತೆಯ ಉಂಗುರವನ್ನು ಆಕೆಯ ಮರಣದ ಬಳಿಕ ಕಂಡು ಮೂರನೆಯ ಜಾರ್ಜರ ಹುಚ್ಚು ಮತ್ತಷ್ಟು ಹೆಚ್ಚಿತು.

● ○ ○

**ಬಾಲ್ಡ್ವಿನರ ಅಜ್ಞಾನ**

ಇಂಗ್ಲೆಂಡಿನ ರಾಜರು ತಮಗೆ ಇಚ್ಛೆ ಬಂದವರನ್ನು ಮದುವೆಯಾಗುವ ಕ್ರಮವಿದೆಯೆಂಬುದಕ್ಕೆ ವಿಕ್ಟೋರಿಯಾ ರಾಜ್ಞಿಯ ಅಂತಹ ವಿವಾಹಗಳನ್ನು ಮಾನ್ಯಮಾಡಿರುವುದೇ ಸಾಕ್ಷಿ. ಆದರೆ ಬಾಲ್ಡ್ವಿನ್ ಮಂತ್ರಿಮಂಡಲಕ್ಕೆ ಅದು ತಿಳಿಯದಿದ್ದುದರಿಂದ ಸ್ವತಂತ್ರ ಮನೋ

**ವಿಂಡ್ಸರ್ ಸಿಂಪ್ಸನರ ಪ್ರೇಮಕಥೆ**

ವೃತ್ತಿಯ ಎಡ್ವರ್ಡರು ಸಿಂಹಾಸನ ತ್ಯಾಗಮಾಡಬೇಕಾಯಿತು. ಡ್ಯೂಕ್

**ಪ್ಯಾರೀಸಿನಲ್ಲಿ**



ಡ್ಯೂಕ್ ಮತ್ತು ಡಚೆಸ್ ಆಫ್ ವಿಂಡ್ಸರರು ಪ್ಯಾರಿಸಿಗೆ ಹೋದಾಗ ತೆಗೆದ ಛಾವಚಿತ್ರವಿದು.

ಆಫ್ ವಿಂಡ್ಸರರ ಮಕ್ಕಳಿಗೆ ರಾಜಮನೆತನದ ಹಕ್ಕುಗಳು ದೊರೆಯಲಾರದೆಂಬ ಕಾನೂನು ಕೇವಲ ಅನ್ಯಾಯವಾಗಿದೆಯೆಂದು ಹಲವು ಪ್ರಸಿದ್ಧ ವ್ಯಕ್ತಿಗಳು ಅಭಿಪ್ರಾಯಪಟ್ಟಿದ್ದಾರೆ.

ಗೆಳೆಯರ ತಂಡದ ಸದಸ್ಯರಾಗಿ ಅಖಿಲ ಕರ್ನಾಟಕದ ಗೆಳೆಯರೊಡನೆ ಸಂಬಂಧ ಬೆಳೆಸಿರಿ.

# ಗೆಳೆಯರ ತಂಡ

[ ಇಪ್ಪತ್ತೈದು ವರುಷಗಳಿಗೆ ಮಿಕ್ಕದ ತರುಣ ತರುಣಿಯರಿಗೆ ಮಾತ್ರ. ]

ಗೆಳೆಯರ ತಂಡದ ಚಟುವಟಿಕೆಗಳಲ್ಲಿ ಭಾಗವಹಿಸಿ ನಿಮ್ಮ ಲೋಕಜ್ಞಾನವನ್ನು ಹೆಚ್ಚಿಸಿರಿ.

ಗೆಳೆಯರ ತಂಡಕ್ಕೆ ಬರೆಯುವಾಗ **"ಗೆಳೆಯರ ತಂಡ", C/o ಅಂತರಂಗ, ಉಡುಪಿ,** ಎಂದು ಬರೆಯಿರಿ.

**ಮಮತೆಯ ಗೆಳೆಯರೆ,**

ಗೆಳೆಯರ ತಂಡವು ಪ್ರಾರಂಭವಾಗಿ ನಾಲ್ಕು ವಾರಗಳು ಕಳೆದುವು. ಕನ್ನಡನಾಡಿನ ಬೇರೆ ಬೇರೆ ಭಾಗಗಳಿಂದ ಪ್ರತಿ ವಾರವು ಹೊಸ ಸದಸ್ಯರು ತಂಡಕ್ಕೆ ಸೇರುತ್ತಿರುವರೆಂದು ನಿಮಗೆ ತಿಳಿಸಲು ಸಂತೋಷವೆನಿಸುತ್ತದೆ.

ಈಗಾಗಲೆ ಸದಸ್ಯರಾಗಿರುವವರು, ತಂಡವು ಹೇಗೆ ಉಪಯುಕ್ತ ಚಟುವಟಿಕೆಗಳನ್ನು ನಡೆಸಬಹುದೆಂದು ಸೂಚನೆಗಳನ್ನು ಕೊಟ್ಟರೆ, ಯೋಗ್ಯವಾದವುಗಳನ್ನು ಸಂತೋಷದಿಂದ ಸ್ವೀಕರಿಸಲಿದ್ದೇನೆ.

ಸದಸ್ಯರೊಳಗೆ ಪತ್ರವ್ಯವಹಾರವನ್ನು ನಡೆಸುವ ವಿಚಾರದಲ್ಲಿ ಗೆಳೆಯರ ಅಭಿಪ್ರಾಯವೇನಿದೆಯೆಂದು ತಿಳಿಯಲು ನನಗೆ ಕುತೂಹಲವಿದೆ. ಸದಸ್ಯರ ಉತ್ತಮವಾದ ಸೂಚನೆಗಳನ್ನು ಈ ವಿಭಾಗದಲ್ಲಿ ಪ್ರಕಟಿಸಲಾಗುವುದು.

ಅಂಚೆ ಚೀಟಿನ ಕುರಿತು ಮುಂದಿನ ಸಂಚಿಕೆಯಲ್ಲಿ ಸ್ವಾರಸ್ಯಮಯ ಲೇಖವೊಂದನ್ನು ಬರೆಯಲಿದ್ದೇನೆ. ವಿನೋದವು ಎಲ್ಲರಿಗೂ ರುಚಿಸುವ ವಿಷಯವಾದುದರಿಂದ ಗೆಳೆಯರ ತಂಡದಲ್ಲಿ ಪ್ರತಿ ವಾರ ಚಿಕ್ಕ ವಿನೋದವಿರಬೇಕೆಂದು ತಂಡದ ಕೆಲವು ಸದಸ್ಯರು ನನಗೆ ಸೂಚಿಸಿದ್ದಾರೆ. ಅವರ ಸೂಚನೆಗನುಸಾರವಾಗಿ ವಿನೋದ ಸಮಸ್ಯೆಯೊಂದನ್ನು ಈ ವಾರದಿಂದ ಪ್ರಾರಂಭಿಸಿದ್ದೇನೆ. ಸದಸ್ಯರು ಕಳುಹಿಸಬಹುದಾದ ವಿನೋದಗಳನ್ನು ಸಂತೋಷದಿಂದ ಸ್ವೀಕರಿಸಲಾಗುವುದು.

ಇತಿ ನಿಮ್ಮ

**"ಗೆಳೆಯ"**

ಈ ವಾರದ

## ವಿನೋದ ಸಮಸ್ಯೆ

ಆನಂದರಾಯರು ಚಕ್ರವಾಕಪುರದ ಬೇಂಕಿಗೆ ಮಧ್ಯಾಹ್ನ ಒಂದು ತಾಸಿಗೆ ಹೋದರು. ಬೇಂಕಿನಲ್ಲಿ ಏಜಂಟರಲ್ಲದೆ ಮತ್ತಾರೂ ಇದ್ದಿಲ್ಲ. ರಾಯರಿಗೆ ಆಶ್ಚರ್ಯವಾಗಿ ಏಜಂಟರೊಡನೆ ಕೇಳಿದರು:

"ಏನು ಸ್ವಾಮಿ, ಕ್ಲಾರ್ಕರೆಲ್ಲಾ ಎಲ್ಲಿ ಹೋಗಿದ್ದಾರೆ?"

"ಇವತ್ತು ಶನಿವಾರವಲ್ಲವೆ ಸ್ವಾಮಿ!" ಎಂದು ಏಜಂಟರು ಉತ್ತರವಿತ್ತರು.

---

ಈ ವಿನೋದದಲ್ಲಿ ನಗೆಹುಟ್ಟಿಸುವ ಭಾಗವಾವುದೆಂಬುದನ್ನು ವಿವರಿಸುವವರ ಹೆಸರುಗಳು ಈ ವಿಭಾಗದಲ್ಲಿ ಪ್ರಕಟಿಸಲಾಗುವುದು.

**ತಂಡದ ಹೊಸ ಸದಸ್ಯರು.**

೮. ಶ್ರೀ. ಟಿ. ಆರ್. ಭಾಗವತ, ವಿದ್ಯಾರ್ಥಿ, ಕರ್ನಾಟಕ ಕಾಲೇಜು, ಧಾರವಾಡ.

ನಿಮ್ಮ ಸದಸ್ಯತನದ ನಂಬರು ೮.

ooo

೯. ಶ್ರೀ. ಅಚ್ಚಿ ನರಸಿಂಹಶೆಟ್ಟಿ, ಶ್ರೀ ರಾಧಾಕೃಷ್ಣ ಫ್ಲೋರ್ ಮಿಲ್ಸ್, ಹಳೆ ತರಗು ಪೇಟೆ, ಬೆಂಗಳೂರು ಸಿಟಿ.

ನಿಮ್ಮ ಸದಸ್ಯತನದ ನಂಬರು ೯.

---

ಗೆಳೆಯರ ತಂಡಕ್ಕೆ ಹತ್ತು ಸದಸ್ಯರನ್ನು ಸೇರಿಸಿ!

"ಧರ್ಮಸಂಕಟ"ವೆಂಬ ಪುಸ್ತಕವನ್ನು ಬಹುಮಾನವಾಗಿ ಪಡೆಯಿರಿ.

**ಗೆಳೆಯರ ತಂಡದ ಕಲಾಭಿರುಚಿಯುಳ್ಳ ಸದಸ್ಯರಿಗೆ.**




ಇದು ಕರ್ನಾಟಕದ ಚಾರಿತ್ರಿಕ ಹಾಗೂ ಕಲಾವೈಭವವನ್ನು ತೋರಿಸುವ ನಕಾಶೆಯ ಭಾವಚಿತ್ರ. ಚಿತ್ರಕಲೆಯಲ್ಲಿ ಅಭಿರುಚಿಯಿರುವ ಸದಸ್ಯರು ವಿಶಾಲಕರ್ನಾಟಕದ ವೈಭವಗಳನ್ನು ತೋರಿಸುವ ಒಂದು ನಕಾಶೆಯನ್ನು ಬಿಡಿಸಿ ಕಳುಹಿಸಿದರೆ ಉತ್ತಮವಾದುದಕ್ಕೆ ಒಂದು ಶ್ರೇಷ್ಠ ಕನ್ನಡ ಗ್ರಂಥವು ಬಹುಮಾನವಾಗಿ ಕೊಡಲ್ಪಡುವುದು.

## "ಎಬಿಸೀನಿಯಾದಲ್ಲಿ ನಿಮ್ಮನ್ನು ವಿವಾಹವು ಕಾಯುತ್ತಿದೆ"

ಮುಸ್ಸೋಲಿನಿಯ ಎಬಿಸೀನಿಯದಲ್ಲಿ ಬಿಳಿ ಸ್ತ್ರೀಯರು ಕಡಿಮೆಯಾಗಿರುವುದರಿಂದ ದೊಡ್ಡ ಗೊಂದಲವುಂಟಾಗಿದೆ. ಇಡೀ ಎಬಿಸೀನಿಯದಲ್ಲಿ ಇಟಾಲಿಯನ್ ಜನಸಂಖ್ಯೆಯೆಂದರೆ ೨೭,೦೦೦. ಇವರಲ್ಲಿ ಸ್ತ್ರೀಯರ ಪ್ರಮಾಣವು ಏಳು ಪುರುಷರಿಗೆ ಒಬ್ಬಳಂತಿದೆ. ಎಬಿಸೀನಿಯಕ್ಕೆ ಸ್ತ್ರೀಯರ ಸಂಖ್ಯೆ ಸಾಲದೆಂದು ಅಲ್ಲಿಯ ಪುರುಷರು ಮುಸ್ಸೋಲಿನಿಗೆ ಅರ್ಜಿ ಮಾಡಿಕೊಂಡಿದ್ದಾರೆ. ಇದಕ್ಕಾಗಿ ಪ್ರಚಾರ ಮಂತ್ರಿಮಂಡಲವು ಇಟೆಲಿಯಲ್ಲಿ ವಿಶೇಷ ಪ್ರಚಾರಶಾಖೆಯೊಂದನ್ನು ತೆರೆದು ಆದಷ್ಟು ತರುಣಿಯರು ಎಬಿಸೀನಿಯಕ್ಕೆ ಹೋಗುವಂತೆ ಯತ್ನಿಸುತ್ತಿದ್ದಾರೆ. 'ಎಬಿಸೀನಿಯದಲ್ಲಿ ನಿಮ್ಮನ್ನು ಮದುವೆಯು ಕಾಯುತ್ತಿದೆ.' ಎಂಬುದೇ ಅಲ್ಲಿಯ ಪ್ರಚಾರದ ಮೂಲಮಾತಾಗಿದೆ.

ಅಂತರಂಗ ಸ್ಪರ್ಧೆಯ ಉತ್ತರಗಳನ್ನು ಬರೆದು ಕಳುಹಿಸುವ ಕೂಪನುಗಳು.



## ಅಂತರಂಗ ಸ್ಪರ್ಧೆ—ನಂ ೧.

ಹೆಸರು . . . . . . . . . . . . .

. . . . . . . . . . . . . . . .

. . . . . . . . . . . . . . . .

ವಿಳಾಸ . . . . . . . . . . . . .

. . . . . . . . . . . . . . . .

. . . . . . . . . . . . . . . .

ಸಹಿ. . . . . . . . . . . . . .

ಉತ್ತರಗಳ ಸಂಖ್ಯೆ . . . . . . . .

ಕಳುಹಿಸಿದ ಹಣವೆಷ್ಟು . . . . . . .

**ವಿ. ಸೂ:** ಉತ್ತರಗಳನ್ನು ಬರೆಯುವಾಗ ಸ್ಪಷ್ಟವಾಗಿ ಬರೆಯಬೇಕು- ಪ್ರತಿಯೊಂದು ಉತ್ತರವೂ ಅಂತರಂಗದ ಕೂಪನಿನಲ್ಲಿಯೇ ಬರೆಯಲ್ಪಡಬೇಕು.



## ❖ ನಿಮ್ಮನ್ನು ಹೆದರಿಸುವ ಆ ಜೈಲು ❖

# ಕಳ್ಳರನ್ನು ನಿರ್ಮಾಣ ಮಾಡುವ ಗುದ್ದು!

ಢಕಾಯಿತಿನ ತಕ್ಸೀರಿಗೋಳಗಾಗಿ ಏಳು ವರ್ಷ ಕಠಿಣ ಶಿಕ್ಷೆ ಪಡೆದು ಮದ್ರಾಸ್ ಪ್ರಾಂತ್ಯದ ಬೇರೆ ಬೇರೆ ಜೈಲುಗಳಲ್ಲಿದ್ದು ಬಂದವರೊಬ್ಬರ ಆತ್ಮ ಕಥೆಯಿದು.

**ನಮ್ಮೂರಿನ ಕಪ್ಪು ದಿನಗಳು**

ಅಹಮ್ಮದ್, ಸೋಜ ಮತ್ತು ನನ್ನನ್ನು ಕೋಣೆಯೊಳಗೆ ಸೇರಿಸಿಟ್ಟು ಪೋಲಿಸರು ಊರಿಗಿಳಿದ ದಂಡಯಾತ್ರೆಯ ಸಂಗತಿಯನ್ನು ಕಳೆದವಾರ ತಿಳಿಸಿದೆನಷ್ಟೆ. ಆ ಕೆಲವು ದಿನಗಳನ್ನು ನಮ್ಮ ಊರಿನ 'ಕರಿ ದಿನಗಳು' ಎಂದು ಕರೆಯಬಹುದು. ಎಲ್ಲಿಂದ, ಯಾವ ಕಡೆಯಿಂದ, ಯಾವ ರೂಪದಿಂದ ಪೋಲಿಸರು ಅವತರಿಸುತ್ತಾರೋ ಎಂದು ಊರವರೆಲ್ಲಾ ನಾಲ್ಕೂಕಡೆ ನೋಡುತ್ತಾ ಹೆಜ್ಜೆಯಿಡಬೇಕಾಗಿದ್ದ ದಿನಗಳವು. ವಿಚಾರಣೆಯು ಮನೆ ಮನೆ, ಕೇರಿ ಮೂಲೆಗಳಲ್ಲಿ ಎಡೆ ಬಿಡದೆ ಕೆಲವು ತಿಂಗಳುಗಳ ವರೆಗೂ ನಡೆಯಿತು. 'ಈ ದಿನ ಪೋಲಿಸರು ವಾಪಾಸು ಹೋದರು' ಈ ಸಂತೋಷ ವಾರ್ತೆಯು ಹೊಸ ಹಬ್ಬದ ಸಂದೇಶದಂತೆ ಫಕ್ಕನೆ ಊರಲ್ಲೆಲ್ಲಾ ಹರಡುವದೊಮ್ಮೆ. ಅಂದು ಊರವರ ಮುಖದಲ್ಲೆಲ್ಲಾ ನಗೆ. 'ಬಂತು ಪುನಃ ಪೋಲಿಸರ ಸವಾರಿ!' ಎಂದಾಯಿತು-ಊರವರೆಲ್ಲರ ನಡೆ, ನುಡಿ, ನೋಟಗಳಲ್ಲಿ ಕಳ್ಳತನದ ಚಿಹ್ನೆ!

**ಲೇಖಾಂಕ ೩.**

ಮಾಸ್ತರರ ಮನೆ ನುಗ್ಗಿದವರು ಕಣ್ಣು, ಕೈ ಕಾಲು, ತಲೆ, ಕಿವಿಗಳಿರುವ ಮನುಷ್ಯರೇ, ಒಬ್ಬಿಬ್ಬರನ್ನು ಬಿಟ್ಟರೆ ನಮ್ಮ ಊರಲ್ಲಿ ಮಿಕ್ಕವರೆಲ್ಲರಿಗೂ ಕಣ್ಣು, ಕೈ ಕಾಲುಗಳಿದ್ದವು. ಅಂಥವರನ್ನೆಲ್ಲಾ ಅನುಮಾನ ದೃಷ್ಟಿಯಿಂದಲೇ ಪೋಲಿಸರು ನೋಡುತ್ತಿದ್ದರು. ಹೀಗಾಗಿ ಎಲ್ಲರ ಹೃದಯದಲ್ಲಿಯೂ ಭಯ, ಅನುಮಾನ. ನಿತ್ಯವೂ ನೋಡುತ್ತಿದ್ದ ಕೇಪಳ ಹೂವಿನ ಗೊಂಚಲು ಫಕ್ಕನೆ ಕೆಂಪು ಮುಂಡಾಸಾಗಿ ಕಾಣುವದಿತ್ತು. ಮೇಯಲಿಕ್ಕೆ ಹೊರಟ ಕೋಣನ ಗೊರಸು ಬೂಟ್ಸಿನ ಶಬ್ದವನ್ನು ಕೊಡುತ್ತಿತ್ತು; ಕತ್ತಲೆಯಲ್ಲಿ ಮನೆಯೊಳಗೆ ಬರುತ್ತಿದ್ದ ಗಂಡನ ಮುಖದಲ್ಲಿ ಪೋಲಿಸರ ಕೆಂಗಣ್ಣನ್ನು ಕಾಣುವಳು ಪತ್ನಿ;! ಹೀಗೆ ನಮ್ಮೂರಿನಲ್ಲಿ 'ಸರ್ವಂ ಪೋಲಿಸು ಮಯಂ' ಆಗಿತ್ತು!

**ತಾಡನ ಮಹಾತ್ಮೆ!**

'ಗುಣವಿಲ್ಲದವನ ಸ। ದ್ಗುಣಿಯ ಮಾಡಿಸುವೇ । ಹಣವೆ ॥' ಎಂಬ ಹಾಡನ್ನು ಗ್ರಾಮಾಫೋನಿನಲ್ಲಿ ನೀವು ಕೇಳಿರುವಿರಷ್ಟೆ. ಸದ್ಗುಣವಿಲ್ಲದವನನ್ನು ಸದ್ಗುಣಿಯೆಂದು ಊರವರ ಬಾಯಿಯಿಂದ ಹೇಳಿಸುವ ಸಾಮರ್ಥ್ಯ ಹಣಕ್ಕಿದ್ದರೆ, ದುರ್ಗುಣವಿಲ್ಲದವನ ಸ್ವಂತ ಬಾಯಿಯಿಂದಲೇ 'ನಾನು ದುರ್ಗುಣಿ' ಎಂದು ಹೇಳಿಸುವ ಮಹಾ ಸಾಮರ್ಥ್ಯ ಗುದ್ದಿಗೆ ಉಂಟು ನೋಡಿ! ಪೋಲಿಸರು ಮಾಸ್ತರರ ಮನೆಯವರೊಡನೆ ಅನುಮಾನವಿದ್ದವರ ಹೆಸರುಗಳನ್ನೆಲ್ಲಾ ಕೇಳಿ ತಿಳಿದುಕೊಂಡಿದ್ದರು. ಯಥಾರ್ಥವಾದರೆ ಮಾಸ್ತರರ ಮನೆಯವರಿಗೆ 'ಎಲ್ಲರಲ್ಲಿಯೂ ಅನುಮಾನ; ಯಾರಲ್ಲಿಯೂ ಅನುಮಾನವಿಲ್ಲ' ಎಂಬಂತಿತ್ತು. ಆ ರಾತ್ರಿ ಕರಿಯ ಗೋಡೆಗಳೇ ಅವರ ಮೇಲೆ ಜರಿದು ಬಿದ್ದಿದ್ದುವು; ಬಂದವರು ಮುಖಕ್ಕೆಲ್ಲಾ ಕಪ್ಪು ಬಳಿದುಕೊಂಡಿದ್ದುದರಿಂದ ಅವರಿಗೆ ಗೊತ್ತಿದ್ದುದು ಅಷ್ಟೆ. ಆದರೆ ಪೋಲಿಸರು ಕೇಳುವಾಗ ಏನನ್ನಾದರೂ ಹೇಳಲೇಬೇಕಲ್ಲ-ಮನಸ್ಸಿಗೆ ತೋರಿದವರ ಹೆಸರನ್ನೆಲ್ಲಾ ಹೇಳಿಬಿಟ್ಟಿದ್ದರವರು. ಅದಕ್ಕೆ ಬೇಕಾಗುವ ಸಲಹೆ

ಗಳನ್ನೆಲ್ಲಾ ಕೊಡಲು ಊರ ಗೌಡ ಕೋಚಣ್ಣ ಸೆಟ್ಟರಿದ್ದಾರಲ್ಲ. 'ನನ್ನ ತಲೆಗೆ ಹೊಡೆದವನ ಕೈಯಲ್ಲಿ ಐದು ಬೆರಳುಗಳಿದ್ದವು' (ಅವರಿಗಷ್ಟೇ ಗೊತ್ತು) ಎಂದು ಮಾಸ್ತರರ ತಮ್ಮ ಹೇಳಿದರೆ 'ಐದು ಬೆರಳುಗಳಿರುವ ನಮ್ಮೂರಿನಲ್ಲಿ ತಿಮ್ಮಪ್ಪ ಸೆಟ್ಟಿ' (ಅವ ಒಂದು ವ್ಯಾಜ್ಯದಲ್ಲಿ ಕೋಚಣ್ಣ ಸೆಟ್ಟಿಗೆದಿರಾಗಿ ಸಾಕ್ಷಿ ಹೇಳಿದವ) ಎಂದು ಕೋಚಣ್ಣ ಸೆಟ್ಟಿ ಹೇಳಿದರಾಯಿತು. ತಿಮ್ಮಪ್ಪ ಸೆಟ್ಟಿಯ ಕೈಯಲ್ಲಿ ಬೆರಳಿದ್ದ ತಪ್ಪಿಗಾಗಿ ಬೆನ್ನಲ್ಲಿಯೂ ಐದು ಬೆರಳುಗಳೂ ಮೂಡಿ ಬರುವಷ್ಟು ಪೋಲಿಸರ ಮುಷ್ಟಿಯೇಟು! ಕೋಚಣ್ಣ ಸೆಟ್ಟಿಯೊಮ್ಮೆ ಖಾಲಿಯೊಂದು ಸೂರಣಗೆಡ್ಡೆ ಕೇಳಿದಾಗ ಕೊಡದಿದ್ದ ದೂಮಪ್ಪ ಪೂಜಾರಿಯ ಮಹಾಪರಾಧವು ಅವನ ಬೆನ್ನಲ್ಲಿ ಸೂರಣಗೆಡ್ಡೆಯಂತಹ ಗೆಡ್ಡೆ ಮೂಡಿಯೇ ಪ್ರಾಯಶ್ಚಿತ್ತ ಹೊಂದಿತು. ಹೀಗೆ ಎಷ್ಟೋ ಸಂಗತಿಗಳು ನಡೆದು ಹೋದವು.

### ಸೂರಪ್ಪನ ಶನಿ!

ಧನಜನ ಬಲಬೇಕು—ಇಲ್ಲವೇ ದೇಹಬಲವಾದರೂ ಇರಬೇಕು, ಇವುಗಳಲ್ಲಿ ಯಾವುದೂ ಇಲ್ಲದವನಿಗೆ ಬಾಯಿಬಲವಿರಬಾರದು. ಪ್ರಪಂಚದಲ್ಲಿ ಬದುಕಲಿಚ್ಛಿಸುವವರಲ್ಲಿ ಇರಲೇ ಬೇಕಾದ ರೀತಿಯಿದು. ಇದಕ್ಕೆ ನಮ್ಮೂರಿನ ಬಡಕಲು ಸೂರಪ್ಪನೊಂದು ನಿದರ್ಶನ. ಅವ ಮುಂಚಿನ ಮಳೆಗಾಲದಲ್ಲಿ ಮಾಸ್ತರರೊಡನೆ ನಾಲ್ಕು ಮುಡಿ ಅಕ್ಕಿ ಸಾಲ ಕೇಳಿದ್ದ. ಮಾಸ್ತರರು ಇಲ್ಲವೆಂದಿದ್ದರು. ಅದನ್ನು ಸೂರಪ್ಪ ಊರಲ್ಲೆಲ್ಲಾ ಹೇಳುತ್ತಾ ಮಾಸ್ತರರನ್ನು ಬೈಯುತ್ತಾ ಬಂದಿದ್ದ. ಕೋಚಣ್ಣ ಶೆಟ್ಟರೊಮ್ಮೆ ಕೆಲಸಕ್ಕೆ ಕರೆದಾಗ ಹೋಗಿರಲಿಲ್ಲ—ಆದರೆ 'ಕೋಚಣ್ಣ ಸೆಟ್ಟಿ ಕೆಲಸ ಮಾಡಿಸಿದರೆ ಕೂಲಿ ಕೊಡುವುದಿಲ್ಲ'ವೆಂದು ಸಾರುವದಕ್ಕಾಗಿ ಮನೆಮನೆಗೆ ಹೋಗಿದ್ದ. ಮಾಸ್ತರರ ಮನೆಗೆ ರಾತ್ರಿ ಧಾಳಿ ನಡೆಸಿದ ಕರಿಮೊಗದವರಲ್ಲಿ ಒಬ್ಬನು ಬಡಕಲು ಮನುಷ್ಯ. ಹೀಗೆ ಇವೆಲ್ಲಾ ಸಂಗತಿಗಳು ಒಟ್ಟಾಗಿ ಶನಿರೂಪವನ್ನಾಂತು ಸೂರಪ್ಪನ ಮೇಲೆ ಬಿದ್ದವು. ಒಂದು ದಿನ ಮುಂಜಾನೆ ಹಗ್ಗ, ಕತ್ತಿ ಹಿಡಿದುಕೊಂಡು ಸೊಪ್ಪು ತರುವೆನೆಂದು ಹೊರಡುತ್ತಾನೆ ಸೂರಪ್ಪ—ಪೋಲೀಸರು ಇದಿರಾಗಿಯೇ ಬಿಟ್ಟರು. ಕೆಂಪು ಮುಂಡಾಸನ್ನು ಕಂಡವನೇ ಸೂರಪ್ಪ ಕಡ್ನಾಲೆ ಧರಿಸಿದ ಪಂಜುರ್ಲಿ ಪಾತ್ರಿಯಂತೆ ಕತ್ತಿ ಹಿಡಕೊಂಡು ನಡುಗಲು ಪ್ರಾರಂಭ! ಕಳ್ಳನು ಮಾತ್ರವೇ ಪೋಲಿಸರಿಗೆ ಹೆದರಬೇಕೆಂಬ ನೀತಿ ನಮಗೂ ಗೊತ್ತು-ಪೋಲಿಸರಿಗೂ ಗೊತ್ತು. ಆದರೆ ಕಳ್ಳರನ್ನು ಕಂಡಾಗ ಜನರು ಹೆದರಿ ನಡುಗುವ ರೀತಿಯೂ ಲೋಕದಲ್ಲುಂಟು! ಸೂರಪ್ಪ ಹೆದರಿದುದು ಮೊದಲಿನ ರೀತಿಗನುಸಾರವಾಗಿ ಎಂದು ತಮ್ಮ ಅನುಕೂಲಕ್ಕಾಗಿ ನಿಶ್ಚೈಸಿಕೊಂಡರು ಪೋಲಿಸರು. ಆ ಬಡಪ್ರಾಣಿಯನ್ನು ಹಿಡಿದು ಗುದ್ದಿ, ಜಜ್ಜಿ ಹದಕ್ಕೆ ತಂದರು! ತಿಂದ—ಸುಮಾರು ಮೂರು ನಾಲ್ಕು ಗುದ್ದು ಬೀಳವ ವರೆಗೂ ತಿಂದ. ದಮ್ಮಯ್ಯ ಹಾಕಿದ, ಕೂಗಿಕೊಂಡ, ನಾಲ್ಕು, ಐದು ಆರನೇ ಗುದ್ದಿಗೆ 'ದಮ್ಮಯ್ಯ! ಹೇಳುತ್ತೇನೆ' ಎಂದ. 'ಹೋ! ಬಂತು. ಸಿಕ್ಕಿತು! ಹೇಳು-ಬಿಡು ಬಾಯಿ!' ಡುಬ್ ಡುಬ್ ಡುಬ್-ಪುನಃ ನಾಲ್ಕು ಗುದ್ದುಗಳು ಒಂದೇ ಹೊಡೆತಕ್ಕೆ!' ಆಯ್ಯೊಬ್ಬ' ನಾನು ಕದ್ದಿದ್ದೇನೆ-ಹೇಳುತ್ತೇನೆ!' ಸೂರಪ್ಪನ ಬಾಯಿಯಿಂದ ಬಂತು. 'ಎಲ್ಲಿಟ್ಟದ್ದೀ ಹೇಳು, ಎಲ್ಲಿ?' ಈ ಮಾತಿನ ಮತ್ತು ಸೂರಪ್ಪನ ಬೆನ್ನಲ್ಲಿಯೇ ಪುನಃ ಎರಡು! 'ಭಾವನ ಮನೆಯಲ್ಲಿ...ಹ್ಞಾ...ಹ್ಞಂ ...ಅಯ್ಯೋ... ಕರಂಪಾಡಿಯಲ್ಲಿ!' ಎಂದ ಸೂರಪ್ಪ. ಆ ಯಮದೂತರು ಸೂರಪ್ಪನ ಜುಟ್ಟು ಬಿಟ್ಟು ಜಡಿದ ಮುಷ್ಟಿಯಲ್ಲೇ ಕೂಲಂಕಷ ವಿಚಾರಿಸಹತ್ತಿದರು. ಪೋಲಿಸರ ಪ್ರಶ್ನೆಗಳಿಗೆ ಪುನಃ ಮೊದಲಿನ ರಾಗವನ್ನೇ ಹಾಡ ಹತ್ತಿದ ಸೂರಪ್ಪ-'ದಮ್ಮಯ್ಯ! ನನಗೊಂದೂ ಗೊತ್ತಿಲ್ಲ. ಕಾಲು ಹಿಡಿಯುತ್ತೇನೆ!' 'ಪುನಃ ಗೊತ್ತಿಲ್ಲ. ಅನ್ನುತ್ತೀಯಾ!' ಎನ್ನುತ್ತಾ ಜುಟ್ಟು ಬಗ್ಗಿಸಿದುದೇ ತಡ-'ದಮ್ಮಯ್ಯ-ಹೇಳುತ್ತೇನೆ. ಹೊಡಿಯಬೇಡೀ-ಅಯ್ಯಾಮ್ಮಾ...ಭಾವನ ಮನೆಯ ಅಡಿಗೆ ಕೋಣೆ.. ಅಬ್ಬಾ....ಹೂಳಿಟ್ಟಿದ್ದೇನೆ' ಇಷ್ಟನ್ನೂ ಸೂರಪ್ಪನ ಬಾಯಿಯಿಂದ ಬರಮಾಡಿಸಿಕೊಂಡರು ಪೋಲೀಸರು.

### ಕರಂಪಾಡಿಯು ಹೆಸರುವಾಸಿ ಅಗೆತ!

ಸರಿ, ದರೋಡೆಯ ಪತ್ತೆಯಾಯಿತು. ಅದಕ್ಕೆ ಸೇರಿದವರೆಂದು ತನಗೆ ಗುರುತವಿದ್ದವರ ಹೆಸರನ್ನೆಲ್ಲಾ ಹೇಳಿಬಿಟ್ಟ ಸೂರಪ್ಪ. ಎಲ್ಲಾ ಮತ್ತೆ ನೋಡೋಣ, ಮೊದಲು ಕರಂಪಾಡಿಗೆ ಹೋಗಿ ಸೊತ್ತುಗಳನ್ನು ಜಪ್ತಿ ಮಾಡಿ ತರುವದೆಂದಾಯಿತು. ಇನ್ಸ್ಪೆಕ್ಟರರು ಸ್ವತಃ ಬಂದರು. ಕೋಚಣ್ಣ ಸೆಟ್ಟಿ, ಸೆಟ್ಟರ ಕಡೆಯ ಎಂಟು ಹತ್ತು ಮಂದಿ, ನಾಲ್ಕಾರು ಜನ ಪೋಲಿಸರು ಸೂರಪ್ಪನನ್ನು ಹಿಡಿದುಕೊಂಡು ಕರಂಪಾಡಿಗೆ ಹೊರಟರು. ಅಲ್ಲಿ ಸೂರಪ್ಪನ ಭಾವ, ಪಾಪ ದಿನಗೂಲಿಯಿಂದ ಹೊಟ್ಟೆ ಹೊ

ಕೊಳ್ಳುವವ. ಅವನ ಅಡಿ ೯ ಕೋಣೆಗೆ ಸೂರಪ್ಪನ ನಿಧಿ (ಸೂ ರಪ್ಪನ ತಂಗಿ!) ಹೋಗಿ ಸೇ ರಿ ಬಹಳ ಕಾಲವಾಗಿತ್ತು. ಅವ ರು ಹೇಗೂ ದಿನ ದೂಡುತ್ತಿದ್ದ ರು. ಗಂಡ ಕೆಲಸಕ್ಕೆ ಹೋಗಿದ್ದ, ಹೆಂ ಡತಿ ಮಾತ್ರ ಮನೆಯಲ್ಲಿದ್ದಳು. ಇವರನ್ನು ಕಂಡೊಡನೆ ಅವಳು ಬೊ ಬ್ಬೆ ಹೊಡೆಯಲು ಪ್ರಾರಂಭ-ವ ರ್ತೆ ಕೇಳಿ ಮನೆಯ ಯಜಮಾ ನನೂ ಓಡಿ ಬಂದ. ಬಂದವನೇ ಸಾ ಕಷ್ಟು ಗುದ್ದುಗಳನ್ನೂ ತಿಂದ. 'ಏನು? ಎಲ್ಲಿ?' ಎಂಬ ಸಂಗತಿ ಅ ವರಿಗರಿಯದು. ಕರಂಪಾಡಿಯಲ್ಲಿ ವಾರ್ತೆ ಹಬ್ಬಿದೊಡನೆಯೇ ಊರ ವರೆಲ್ಲಾ ಕೂಡಿದರು. ಮನೆಯ ಸುತ್ತ ಪಹರೆ ನಿಲ್ಲಿಸಿ, ಹಾರೆಗುದ್ದಲಿ ಗಳನ್ನು ತರಿಸಿ ಅಡಿಗೆ ಕೋಣೆಯ ನ್ನು ಅಗೆಯಲು ಪ್ರಾರಂಭವಾಯಿ ತು. ಆ ಬದಿಯಲ್ಲೊಬ್ಬ, ಈ ಬದಿ ಯಲ್ಲೊಬ್ಬ ಪೋಲೀಸು, ಹಾರೆ ಹಾ ಕುವ ಸ್ಥಳ ತೋರಿಸುತ್ತಾ ನಿಂತ. ಇನ್ಸ್ ಪೆಕ್ಟರರು ಎರಡೂ ಕೈಗಳನ್ನು ಚ ಡ್ಡಿಯ ಕಿಸೆಯೊಳಗೆ ತುರುಕಿಸಿಕೊಂ ಡು ಮೇಲೇಳುವ ನಿಧಿಯನ್ನು ಅವ ಂತ್ರಿಸುವರೆ ತಯಾರಾಗಿದ್ದರು. ಕ್ಷಿ ೕರ ಸಾಗರವನ್ನು ಮಥಿಸುವಾಗ ಒಂದೊಂದಾಗಿ, ಕಾಮಧೇನು, ಕಲ್ಪ ವೃಕ್ಷ, ಪಾರಿಜಾತ- ಬಂದಂತೆ ಬಿ ಳಿ ಮಣ್ಣು, ಕೆಂಪು ಮಣ್ಣು, ಕೇಡಿ ಮಣ್ಣು ಮೇಲೆ ಬಿತ್ತು. ಇನ್ನೇ ನು? ಅಮೃತ ಕಲಶ ಮಾತ್ರ ಬಾಕಿ. ಠೆಂಕ್ ಎಂದಿತು ಹಾರೆಯ ಪೆ ಟ್ಟು 'ಹ್ಞಾಂ' ಎಂದರು ಇನ್ಸ್ಪೆಕ್ಟ ರು. ಯಾವುದಾದರೊಂದು ನಾ ಟ್ಯಕ್ಕೆ ಪೆಟ್ಟಾಗಿ ಹಾರಿರಬೇಕು! ಇ ಸ್ಟ, ಏನೂ ಇಲ್ಲ. ಆ ಮೇಲೆ, ಎಲ್ಲಾ ಪೆಟ್ಟುಗಳಿಗೂ ಠೆಂಕ್, ಠಣಾಂ, ಠರ್ – ಹಾರೆ ನಾಟುವುದಿಲ್ಲ—ತಾಜಾ ಬಂಡೆಕಲ್ಲು! ಇನ್ಸ್ಪೆಕ್ಟರರು ಕರ ವಸ್ತ್ರ ತೆಗೆದು ಮುಖವೊರಸಿಕೊಂಡರು. ಪೋಲೀಸರು ದೈನ್ಯ ಮುಖಮುದ್ರೆಯಿಂದ ಮೇಲಧಿಕಾರಿಯನ್ನು ನೋಡಿದರು. ಅಡಿಗೆ ಕೋಣೆಯಿಡೀ ಹೊಂಡವಾಗಿದೆ- ಪೋಲಿಸರನ್ನೂ ಅವರ ಕಡೆಯವರನ್ನೂ ಒಟ್ಟಿಗೆ ಹಾಕಿ ಮುಚ್ಚುವಷ್ಟು ದೊಡ್ಡ ಹೊಂಡವಾಗಿದೆ! ಆದರೆ ಆ ಹೊಂಡದಿಂದ ತೆಗೆಯಲೇನೂ ಸಿಕ್ಕಲಿಲ್ಲ. ಅದಕ್ಕೆ ಇವರನ್ನು ಹಾಕುವರಾರೂ ಇಲ್ಲದೆ ಹೋದರು! ಇನ್ಸ್ಪೆಕ್ಟರರು ಕೆಲಸ ನಿಲ್ಲಿಸಿ ಕೆಲವರ ವಿಚಾರಣೆ ನಡಿಸಿದರು. ಆ ಪರೋಡೆಯ ಗಾಳಿಯೇ ಕರಂಪಾಡಿಗೆ ಬೀಸಲಿಲ್ಲವೆಂದು ತೀ ಯಿತು.

**ಅಳಬೇಕೊ? ನಗಬೇಕೊ?**

ನಾಸ್ತಿಗ, ಈ ವರೆಗೂ ನ್ಯಾಯ ದೊರೆಯದ- ಇನ್ನು ಮುಂದೆ ದೊರೆಯಲು ಸಾಧ್ಯವಿಲ್ಲದ ಒಂದು ಚರಿತ್ರೆಯನ್ನು ಹೇಳಲು ಹೊರಟವ. ಅದರಲ್ಲಿ ಅದ್ಭುತವಿರಬಹುದು, ಆಶ್ಚರ್ಯ ತೋರಬಹುದು- ಆದರೆ ಎಲ್ಲಕ್ಕೂ ಅನ್ಯಾಯವೇ ಅಡಿಗಲ್ಲಾಗಿದೆ. ವಿನೋದದ ಸಂಗತಿಯೆಂದರೆ ಅಂತಹ ಚರಿತ್ರೆಯಲ್ಲಿಯೂ ವಿನೋದವುಂಟಲ್ಲಾ ಎಂಬುದು. ಬಡಕಲು ಸೂರಪ್ಪನ ಬಗ್ಗಿದ ಬೆನ್ನ ಮೇಲಿನ ಆ ಗರ್ನಾಲುಗಳಂತಹ ಗುದ್ದುಗಳು, ಆ ಶಿಕ್ಷೆ ತಪ್ಪಿಸಿಕೊಳ್ಳುವದಕ್ಕಾಗಿ ಕಳ್ಳತನ ಮಾಡಿದ ಅವನ ಶೋಚನೀಯ ಸ್ಥಿತಿ, ದಿನಕೂಲಿಯವನಾದ ಸೂರಪ್ಪನ ಭಾವನಿಗೆ ಒಂದು ವಾರದಷ್ಟು ಕೆಲಸ ತನ್ನ ಅಡಿಗೆ ಮನೆಯಲ್ಲಿಯೇ ದೊರೆತ ಆ ದೃಶ್ಯ- ಇವನ್ನೆಲ್ಲಾ ನೆನಸಿಕೊಂಡಾಗ ಅಳು ಬರುತ್ತದೆ. ಆದರೆ, ಸಬ್ ಇನ್ಸ್ಪೆಕ್ಟರರು ಪೋಲಿಸರು, ಊರ ಗೌಡರೆಲ್ಲಾ ಒಟ್ಟಾಗಿ ಕೊಪ್ಪರಿಗೆ ಅಗೆಯಲು ಹೊರಟ ಆ ವಿಜಯಯಾತ್ರೆ, ದೊಡ್ಡದೊಂದು ಪತ್ತೆ ಸಾಧಿಸಿದುದಕ್ಕಾಗಿ ಸರಕಾರದಿಂದ, ಬಡ್ತಿಯನ್ನೋ, ಬಹುಮಾನವನ್ನೋ ಪಡೆಯಲಿರುವ ಇನ್ಸ್ಪೆಕ್ಟರರು, 'ಅಡಿಗೆ ಮನೆಯನ್ನಲ್ಲ—ಭೂಮಿಯನ್ನೇ ಅಡಿಮೇಲುಮಾಡಿಬಿಟ್ಟೆ'ನೆಂಬ ಹೆಮ್ಮೆಯಿಂದ ನಿಂತ ಆ ಠೀವಿ, ಆ ಮೇಲೆ ಸಪ್ಪೆ ಮುಖದ ಬೆವರೊರಸಿಕೊಳ್ಳುತ್ತಾ ಏನೇನೋ ಕೇಳಿ ಹೊರಟುಹೋದ ರೀತಿ- ಇವನ್ನೆಲ್ಲಾ ನೆನಸಿಕೊಂಡಾಗ ನಗೂ ಬರುತ್ತದೆ. ಒಂದೋ ಕದ್ದ ಕಳ್ಳರನ್ನು ಕಂಡು ಹಿಡಿಯಬೇಕು, ಇಲ್ಲವಾದರೆ ಕಳ್ಳರನ್ನು ಮಾಡಿಯಾದರೂ ಕೊಡಬೇಕು. ಎರಡರಲ್ಲೊಂದನ್ನು ಸಾಧಿಸದೆ ಪೋಲಿಸರಿಗೆ ನಿರ್ವಾಹವುಂಟೆ?

**ಅದಕ್ಕಾಗಿ ಮುಂದೇನು ಮಾಡಿದರೆಂಬುದನ್ನು ಮುಂದಿನ ವಾರದ ಸಂಚಿಕೆಯಲ್ಲಿ ನೋಡಿರಿ.**

---

## ನನಗರಿಯದು-ನಿಮಗೆ



**ಕಲ್ಕತ್ತೆಯು ಒಡೆಯುತ್ತದೆಯೆ?**



**ಆಶ್ಚರ್ಯ!**

ಹಿಂದಿನಿಂದೊಂದು ಹೆಣ ಬಂತು. ಮುದುಕಿ ದೂರ ಸರಿದು ಅದಕ್ಕೆ ದಾರಿ ಬಿಟ್ಟುಕೊಟ್ಟಳು. ಅದು ಮುಂದೆ ಹೋದ ನಂತರ ಹತ್ತಿರದಲ್ಲಿದ್ದ ಇನ್ನೊಬ್ಬಳು ಕೇಳಿದಳು.

''ಯಾರದಪ್ಪಾ ಅದು ಹೆಣ?''

''ಅದೂ ನೋಡೂ, ನಮ್ಮೂರಿನ ಸುಬ್ಬುನ ತಾಯಿ. ನಾನು ಸಾಯುವುದಕ್ಕೆ ಮೂರು ದಿವಸದ ಮುಂಚೆ ಹೋಗಿ ನೋಡಿ ಬಂದಿದ್ದೆ. ಕಲ್ಲುಗುಂಡಿನ ಹಾಗೆ ಇದ್ದಳು!

ooo

**ಕೇಸಿವೆ ಬೇಕು!**

''ಏನು ಶೆಟ್ರೆ, ಸಾಸಿವೆ ಕೇಸಿವೆ ಏನಾದ್ರೂ ಬೇಕೊ?'' ಕೇಳಿದರು ನರಸಿಂಹ ಕಾಮತರು.

''ಬೇಕು ಸ್ವಾಮಿ, ಏಳು ಸೇರು ಕೇಸಿವೆ ಕೊಡಿ''

ooo

**ಯೋಚನಾ ಶಕ್ತಿ!**

''ನೀವು ನಿರುದ್ಯೋಗಿಗಳೆಂದು ಹೇಳುತ್ತೀರಿ. ನಿರುದ್ಯೋಗಿಯಾದವರು ಬೇಂಕಿನಲ್ಲಿ ಏಳು ವರ್ಷ ಕೆಲಸ ಮಾಡಿರುವುದಾದರೂ ಹೇಗೆ?'' ಎಂದು ಕೇಳಿದರು ಬೇಂಕಿನ ಅಧ್ಯಕ್ಷರು.

''ಅರ್ಜಿ ಹಾಕುವವರಿಗೆ 'ಯೋಚನಾಶಕ್ತಿಯಿರಬೇಕು' ಎಂದು ನಿಮ್ಮ ಜಾಹಿರಾತಿನಲ್ಲಿತ್ತು ಸ್ವಾಮಿ. ಹಾಗೆ ಯೋಚಿಸಿ ಏಳು ವರ್ಷದ ಅನುಭವವಿದೆಯೆಂದು ಬರೆದೆ''

ooo

**ಲೈಸೆನ್ಸ್!**

ಮ್ಯುನಿಸಿಪಾಲಿಟಿಯಿಂದ ದನಕ್ಕೆ ಲೈಸೆನ್ಸು ತೆಗೆದುಕೊಳ್ಳದಿದ್ದುದಕ್ಕಾಗಿ ರಾಮರಾಯರ ಮೇಲೆ ಕೇಸು ಮಾಡಿದ್ದರು. ಕೋರ್ಟಿನಲ್ಲಿ ಮೆಜಿಸ್ಟ್ರೇಟರು ಕೇಳಿದರು:

''ದನಕ್ಕೆ ಪುನಃ ಲೈಸನ್ಸು ಮಾಡಿಸಲು ನಿಮಗೆ ಇಚ್ಛೆಯಿಲ್ಲವೆಂದು ತಿಳಿಯಬೇಕೇ..?

''ಹೌದು ಸ್ವಾಮಿ, ಆದರೆ...''

''ನಮಗೆ 'ಆದರೆ'ಗಳು ಬೇಕಾಗಿಲ್ಲ. ನಿಮಗೆ ಜುಲ್ಮಾನು ಮಾಡಲಾಗುವುದು. ನಿಮ್ಮ ಲೈಸನ್ಸಿನ ನಾಯಿದೆ ಕಳೆದುಹೋಗಿದೆ.''

''ಆದರೆ.. ದನ ಕೂಡಾ ಸತ್ತು ಹೋಗಿದೆ ಸ್ವಾಮಿ!''

ooo

**ಮೌನ!**

''ಯಾವಾಗಲಾದರೂ ಸ್ತ್ರೀಯರ ತಂಡವೊಂದು ಸುಮ್ಮನಿರುವುದನ್ನು ನೀವು ಕಂಡಿದ್ದೀರಾ?''

''ಒಹೋ, ಅವರಲ್ಲಿ ಯಾರು ದೊಡ್ಡವರೆಂದು ಕೇಳಿದಾಗ ಎಲ್ಲರೂ ಮೌನ.

**ಧೂಮಕೇತು!**

''ಧೂಮಕೇತುವೆಂದರೆ ಬಾಲವಿರುವ ಒಂದು ಗ್ರಹ''ವೆಂದು ವಿವರಿಸಿದರು ಕ್ಲಾಸಿನ ಉಪಾಧ್ಯಾಯರು. ಸ್ವಲ್ಪ ಹೊತ್ತಿನ ಬಳಿಕ ''ಬಾಲವಿರುವ ಇನ್ನೊಂದು ಗ್ರಹದ ಹೆಸರನ್ನು ಯಾರಾದರೂ ಹೇಳಬಲ್ಲಿರಾ?''

ಕೂಡಲೆ ಒಬ್ಬ ವಿದ್ಯಾರ್ಥಿ ಎದ್ದು ನಿಂತು. ''ನಾ ಹೇಳ್ತೇನೆ ಸಾರ್, ಬಾಲವಿದ್ದ ಇನ್ನೊಂದು ಗ್ರಹ ಪಟಂಗ''

ooo

**ಉಪಕಾರ!**

''ಏನ ಹೋ ಮಾಣಿ? ಒಂದು ಗಂಟೆಯಿಂದ ಕಾಯುತ್ತಿದ್ದೇನೆ, ಇನ್ನೂ ನೋಂಡ ಸಾಂಬಾರ್ ತರ ತರಲಿಲ್ಲ''

'ಬಹಳ ಉಪಕಾರ ಸ್ವಾಮಿ, ತಮ್ಮಂಥ ದಯಾಮಯಿಗಳೇ ಹೊಟೆಲಿಗೆ ಬರುವಂತಾದರೆ ನಷ್ಟಂತವ ಬದುಕಿದಂತೆಯೇ ಸರಿ'' ಎಂದು ಮಾಣಿಯ ಉತ್ತರ!

---

**ಅಂತರಂಗದ ಸ್ಪರ್ಧೆಯನ್ನು ಬಿಡಿಸಿ ಲಾಭಹೊಂದಲು ಮರೆಯಬೇಡಿರಿ!**

# ಕರ್ನಲ್ ಲಿಂಡ್‌ಬರ್ಗ್‌ನ ನಿಗೂಢ ಜೀವನ!



ಕರ್ನಲ್ ಲಿಂಡ್‌ಬರ್ಗ್! ಈ ಮಹಾನುಭಾವನ ಹೆಸರನ್ನು ಪ್ರತಿಯೊಬ್ಬನೂ ಪತ್ರಿಕೆಗಳಲ್ಲಿ ಓದಿರಲೇಬೇಕು. ಇವನಾರು? ಸಮಗ್ರ ಜಗತ್ತಿನಲ್ಲಿ ಅಷ್ಟೊಂದು ಪ್ರಸಿದ್ಧಿಯನ್ನು ಪಡೆದಿರುವ ಈ ವ್ಯಕ್ತಿಯ ಚಟುವಟಿಕೆಗಳಾವುವು?

ಈ ಪ್ರಶ್ನೆಗಳಿಗೆ ಹೆಚ್ಚಿನವರು ಉತ್ತರವನ್ನು ಕೊಡಲರಿಯರು. ಅವನೊಬ್ಬ ವೈಮಾನಿಕನೆಂದು ಕೆಲವರು ಹೇಳಬಹುದು. ಬರೇ ವೈಮಾನಿಕನಾಗಿದ್ದರೆ ಅವನಿಗೇಕಷ್ಟು ಪ್ರಾಮುಖ್ಯತೆ?

ಇತ್ತೀಚೆಗೆ ಕರ್ನಲ್ ಲಿಂಡ್‌ಬರ್ಗ್‌ನು ಮಾಡುತ್ತಿರುವ ಚಟುವಟಿಕೆಗಳಿಂದ ಪ್ರಸಿದ್ಧ ರಾಜಕಾರಣಿಗಳು ತಬ್ಬಿಬ್ಬಾಗಿದ್ದಾರೆ. ಲಿಂಡ್‌ಬರ್ಗ್ ಬ್ರಿಟನಿನಲ್ಲಿ ವಾಸಿಸಿದರೂ ಅವನು ಸಪತ್ನೀಕನಾಗಿ ಜರ್ಮನಿ, ರಷ್ಯ, ಜೆಕೊಸ್ಲೊವೇಕಿಯ ಮತ್ತು ಫ್ರಾನ್ಸು ದೇಶಗಳಿಗೆ ಆಗಾಗ್ಗೆ ಹೋಗುತ್ತಿದ್ದಾನೆ.

ಕಳೆದ ವರುಷ ಅವನು ಜರ್ಮನಿಗೆ ಹೋಗಿ ಹಿಟ್ಲರ್, ಗೋರಿಂಗ್ ಮತ್ತು ಇನ್ನೂ ಹಲವು ನಾಝಿ ಅಧಿಕಾರಿಗಳನ್ನು ಕಂಡು ಮಾತಾಡಿದ! ಈ ವರುಷ ಕೂಡಾ ಜರ್ಮನಿಗೆ ಹೋಗಿದ್ದಾನೆ. ಈಗಲೂ ಅವನು ಜರ್ಮನಿಗೆ ಹೋಗಿ ಬರುತ್ತಿದ್ದಾನೆ.

* * *

## ನಾಝಿ ಪ್ರಚಾರಕ

ಈ ಮಹಾನುಭಾವನು ನಾಝೀ ಪ್ರಚಾರಕನೆಂಬುದು ಇತ್ತೀಚೆಗೆ ತಿಳಿದು ಬಂದಿದೆ. ಬ್ರಿಟಿಷ್ ಪ್ರಧಾನರಾದ ನೆವಿಲ್ ಚೇಂಬರ್ಲಿನರು ಹಿಟ್ಲರನು ಹೇಳಿದಂತೆ ಕುಣಿಯಲು ಈ ವ್ಯಕ್ತಿಯೇ ಕಾರಣನಾಗಿದ್ದಾನೆ. ಜರ್ಮನಿಯ ಆಕಾಶಪಡೆಯು ಇಂಗ್ಲೆಂಡಿಗಿಂತ ಎಷ್ಟೋ ಪಾಲು ಉತ್ತಮವಾಗಿದೆಯೆಂದೂ ಜರ್ಮನಿಯಲ್ಲಿರುವಷ್ಟು ಆಕಾಶಪಡೆಯು ಇನ್ನೆಲ್ಲಿಯೂ ಇಲ್ಲವೆಂದೂ ಈ ಮಹಾಶಯನು ಇತ್ತೀಚೆಗೆ ಹೇಳಿದ್ದನು. ಬ್ರಿಟಿಷ್ ಅಧಿಕಾರಿಗಳಿಗೆ ಇವೆಲ್ಲವನ್ನು ಮನದಟ್ಟು ಮಾಡಿದ ಬಳಿಕ ಜರ್ಮನಿಯೊಡನೆ ಯಾವುದಾದರೊಂದು ಒಪ್ಪಂದವನ್ನು ಮಾಡಿಕೊಂಡು ಅವ್ಯವಸ್ಥೆಯಿಂದ ದೂರವಾಗುವುದು ಲೇಸೆಂದು ಬುದ್ಧಿವಾದವನ್ನು ಕೊಡುವುದು ಇವನ ಕೆಲಸವಾಗಿದೆ.

* * *

## ಗೋಮುಖದ ವ್ಯಾಘ್ರ

ಕರ್ನಲ್ ಲಿಂಡ್ ಬರ್ಗ್ ಇತರರೊಡನೆ ತಾನು ನಾಝಿ ವಿರೋಧಿಯೆಂದು ಹೇಳುವುದಿದ್ದರೂ, ಅವನನ್ನು ಮಾನ್ಯತೆಯಿಂದ ಕಾಣುವವರು ಅವನಷ್ಟು ದೊಡ್ಡ ನಾಝಿ ಭಕ್ತರು ಇನ್ನಾರೂ ಇಲ್ಲವೆನ್ನುತ್ತಾರೆ. ಹಿಟ್ಲರ್ ಮತ್ತು ಜರ್ಮನಿಯೆಂದರೆ ಕರ್ನಲ್ ಲಿಂಡ್‌ಬರ್ಗರಿಗೆ ಅಪಾರ ಸಂತೋಷವಾಗುತ್ತದೆ.

* * *

## ಸೊವಿಯೆಟ್ ರಷ್ಯದಲ್ಲಿ-!

ಜಗತ್ತಿನ ಪ್ರಸಿದ್ಧ ವೈಮಾನಿಕನಾದುದರಿಂದ ಇವನು ರಷ್ಯಕ್ಕೆ ಹೋದಾಗ ಸೊವಿಯೆಟ್ ಸರಕಾರವು ಎಲ್ಲಾ ಸೌಕರ್ಯಗಳನ್ನೊದಗಿಸಿ ಕೊಟ್ಟಿತು. ರಷ್ಯದ ವಿಮಾನಪಟುಗಳು ಅವರ ಎಲ್ಲಾ ರಹಸ್ಯಗಳನ್ನು ಇವನೊಂದಿಗೆ ಹೇಳಿದರು. ರಷ್ಯದ ಸಮಗ್ರ ವಿಮಾನಪಡೆಯು ಇವನಿಗೆ ತೋರಿಸಲ್ಪಟ್ಟಿತು.

* * *

## ಅಪಪ್ರಚಾರ ನಡೆಸಿದ ಲಿಂಡ್‌ಬರ್ಗ್!

ರಷ್ಯವು ಅಷ್ಟೆಲ್ಲಾ ಸನ್ಮಾನಿಸಿದುದಕ್ಕಾಗಿ ಕರ್ನಲ್ ಲಿಂಡ್‌ಬರ್ಗ್ ಇಂಗ್ಲೆಂಡಿಗೆ ಹೋದೊಡನೆಯೇ ರಷ್ಯದ ವಿಮಾನಪಡೆಯು ನಿಷ್ಪ್ರಯೋಜಕವಾದುದೆಂಬ ಸುಳ್ಳು ಸುದ್ದಿಯನ್ನು ಹಬ್ಬಿಸಿದನು. ಮೊನ್ನೆಯ ಜೆಕೊಸ್ಲೊವೇಕಿಯಾ ಅವ್ಯವಸ್ಥೆಯು ಪ್ರಚಂಡಾವಸ್ಥೆಗೆ

ಬಂದಾಗ ಕೂಡಾ ಇವನು ಫ್ರಾನ್ಸಿಗೆ ಹೋಗಿ ಅದೇ ಅಪಪ್ರಚಾರವನ್ನು ಮಾಡಿದ. ಇದರಿಂದಾಗಿ ರಷ್ಯವನ್ನು ಫ್ರಾನ್ಸು ಕಡೆಗಣಿಸಿ ಇಂಗ್ಲಿಷರ ಬೆಂಬಲವನ್ನಾಶ್ರಯಿಸಿತು. ಆದುದರಿಂದಲೆ ಮ್ಯೂನಿಕ್ ಒಪ್ಪಂದದಲ್ಲಿ ರಷ್ಯವು ಭಾಗವಹಿಸಲಿಲ್ಲ.

* * *

## ಜರ್ಮನಿಗೆ ಇಂಗ್ಲೆಂಡಿನ ರಹಸ್ಯವನ್ನು ತಿಳಿಸುವ ವ್ಯಕ್ತಿ.

ರಷ್ಯದ ರಹಸ್ಯಗಳನ್ನು ಇಂಗ್ಲೆಂಡ್ ಮತ್ತು ಫ್ರಾನ್ಸಿನಲ್ಲಿ ಹೇಳಿದಂತೆಯೇ, ಇಂಗ್ಲೆಂಡಿನ ರಹಸ್ಯಗಳನ್ನು ಲಿಂಡ್‌ಬರ್ಗ್ ಜರ್ಮನಿಯಲ್ಲಿ ಹೇಳುತ್ತಿದ್ದಾನೆಂದು ಬ್ರಿಟಿಷ್ ವಿಮಾನಪಡೆಯವರ ಅಭಿಪ್ರಾಯವಾಗಿದೆ. ಜರ್ಮನಿಯಲ್ಲಿ ಲಿಂಡ್‌ಬರ್ಗನಿಗೆ ಮಹತ್ವದ ಸನ್ಮಾನವನ್ನೀಯುತ್ತಾರೆ. ಕಾರಣ- ಜರ್ಮನಿಗಾಗಿ ಅವನು ದುಡಿಯುತ್ತಿದ್ದಾನೆ. ಇದಕ್ಕಾಗಿಯೇ ಜರ್ಮನ್ ವೃತ್ತಪತ್ರಿಕೆಗಳು ಅವನನ್ನು ಕೊಂಡಾಡುತ್ತಿವೆ. ಈ ನಿಗೂಢವ್ಯಕ್ತಿಯ ಮಹತ್ವವು ಈ ಚಟುವಟಿಕೆಯ ಮೇಲೆ ಹೊಂದಿಕೊಂಡಿದೆ.

* * *

## ರಷ್ಯದ ಕಟುವಿಮರ್ಶೆ

ಇತ್ತೀಚೆಗೆ ರಷ್ಯನ್ ಸರಕಾರದ ಪತ್ರಿಕೆಯಾದ "ಪ್ರಾವ್ಡಾ" ಎಂಬುದರಲ್ಲಿ ಕಟುವಿಮರ್ಶೆಯೊಂದು ಪ್ರಕಟವಾಗಿತ್ತು. ಮೊನ್ನೆ ರಷ್ಯದ ವಿಮಾನಪಡೆಯನ್ನು ಕಂಡು ಬ್ರಿಟನಿಗೆ ಹಿಂತೆರಳಿ, ಜರ್ಮನಿಯನ್ನು ಬ್ರಿಟನ್ ಮತ್ತು ಫ್ರಾನ್ಸು ವಿರೋಧಿಸದಂತೆ ರಷ್ಯದ ಕುರಿತು ಅಪಪ್ರಚಾರ ನಡೆಸಿರುವುದೇ ಈ ವಿಮರ್ಶೆಗೆ ಕಾರಣವಾಗಿದೆ.

* * *

## ಸೋವಿಯಟ್ ವೈಮಾನಿಕರ ಪತ್ರ

"ಪ್ರಾವ್ಡಾ"ದಲ್ಲಿ "ಲಿಂಡ್‌ಬರ್ಗರ ಹೊಸ ದಾಖಲೆ"ಯೆಂಬ ಶಿರೋನಾಮೆಯ ಕೆಳಗೆ ಸೋವಿಯಟ್ ವೈಮಾನಿಕರ ತಂಡದ ಒಂದು ಪತ್ರವು ಪ್ರಕಟವಾಗಿತ್ತು. ಇಂಗ್ಲೆಂಡಿನಲ್ಲಿ ಲೇಡಿ ಆಸ್ಟರರು ಏರ್ಪಡಿಸಿದ ಒಂದು ಸತ್ಕಾರಕೂಟದಲ್ಲಿ ಲಿಂಡ್‌ಬರ್ಗರು ಫ್ಯಾಸಿಸ್ಟರ ಪರವಾಗಿ ಮಾತಾಡಿ, ರಷ್ಯದ ವಿಮಾನಪಡೆಯ ದೌರ್ಬಲ್ಯವನ್ನು ವಿವರಿಸಿದರೆಂದು ಬರೆಯಲಾಗಿದೆ. ಈ ಸುಳ್ಳಿನ ಕಂತೆಯೇ ಲಿಂಡ್‌ಬರ್ಗರ ನವೀನ ದಾಖಲೆಯೆಂದು ಅದರಲ್ಲಿ ಹೇಳಲಾಗಿದೆ.

* * *

## ಪ್ರಾವ್ಡಾ ಪತ್ರಿಕೆಯ ಆರೋಪಣೆ

"ಲಿಂಡ್‌ಬರ್ಗನು ತನ್ನ ಫ್ಯಾಸಿಸ್ಟ್ ಯಜಮಾನರಿಗೆ ಬೇಕಾದಂತೆ ವರ್ತಿಸಿದ್ದಾನೆ- ಸುಳ್ಳಿನ ವಾತಾವರಣದಲ್ಲಿ ಎಲ್ಲಾ ದಾಖಲೆಗಳು ಮುರಿಯುವಂತೆ ಹಾರಾಡಿ, ಮ್ಯೂನಿಕ್ ಒಪ್ಪಂದದ ಯಶಸ್ಸಿಗೆ ತನ್ನ ಪಾಲಿನ ಸೇವೆಯನ್ನು ಮಾಡಿರುವ ಕೀರ್ತಿಯು ಲಿಂಡ್‌ಬರ್ಗನಿಗೆ ಸಲ್ಲುತ್ತದೆ" ಎಂದು ಪ್ರಾವ್ಡಾ ಪತ್ರಿಕೆಯು ಸಂಪಾದಕೀಯ ಬರೆಹದಲ್ಲಿ ಹೇಳಿರುತ್ತದೆ. ಜರ್ಮನ್ ವಿಮಾನಪಡೆಯು ಫ್ರೆಂಚ್, ರಷ್ಯನ್ ಮತ್ತು ಇಂಗ್ಲಿಷ್ ಪಡೆಯನ್ನು ಒಮ್ಮೆಯೇ ಸೋಲಿಸಿಬಿಡುವುದೆಂಬ ಲಿಂಡ್‌ಬರ್ಗನ ಹೇಳಿಕೆಯು ಕೇವಲ ಸುಳ್ಳೆಂದು ರಷ್ಯನ್ ವೈಮಾನಿಕರು ಹೇಳಿದ್ದಾರೆ. ಅವರ ಪತ್ರದ ಕೊನೆಯಂಶದಲ್ಲಿ ಹೀಗೆ ಬರೆಯಲ್ಪಟ್ಟಿದೆ- "ಕರ್ನಲ್ ಲಿಂಡ್‌ಬರ್ಗನು ಎಂದಿನಂತೆ ಲೇಡಿ ಆಸ್ಟರರ ಮಿತ್ರರಾದ ಹಿಟ್ಲರ್ ಮುಸ್ಸೋಲಿನಿಯರಿಗೆ ಸೋವಿಯಟನ್ನು ವಿರೋಧಿಸುವ ಕಲ್ಪನಾ ಕಥೆಗಳನ್ನು ಣ್ಣಿಸುತ್ತಿದ್ದಾನೆ. ಈ ಜರ್ಮನ್ ಫ್ಯಾಸಿಸ್ಟ್ ಮರಿಯು ನಿಜವಾಗಿಯೂ ಜಗತ್ತಿನೆದುರು ನಗೆಯುಂಟುಮಾಡುವ ಒಂದು ವಸ್ತುವಾಗಿದ್ದಾನೆ."

---

# ಚಿಕ್ಕ ಕತೆಗಳು

## ಹಿಟ್ಲರನಿಗೆ ಹೂವಿನ ಬೋಂಬು; ಗ್ಲೇಡ್‌ಸ್ಟನರಿಗೆ ರೊಟ್ಟಿಯ ಮಾಲೆ!

ಈ ಯುಗದಲ್ಲಿ ಅಪ್ರತಿಮ ಸಾಹಸವನ್ನು ತೋರುವ ವ್ಯಕ್ತಿಗಳಿಗೆ ಗೌರವಾದರಗಳಿಗೆ ಕಡಿಮೆಯಿಲ್ಲವೆನ್ನಿ. ಅತಿಯಾದರೆ ಹಾಲು ವಿಷವೆಂಬಂತೆ ವಿಶೇಷ ಗೌರವದಿಂದ ಕೆಲವೊಮ್ಮೆ ಬಹಳಹಾನಿಯುಂಟಾಗುತ್ತದೆ. ಕೆಲವು ತಿಂಗಳುಗಳ ಹಿಂದೆ ಹೆರ್ ಹಿಟ್ಲರನಿಗೆ ಒಬ್ಬ ಜರ್ಮನ್ ಸ್ತ್ರೀಯು "ಹೂವಿನ ಬೋಂಬನ್ನೆಸೆದು ಯಾತನೆಯುಂಟುಮಾಡಿದ ಕತೆ ನಿಮಗೆ ತಿಳಿದಿರಬಹುದು. ೧೮೭೩ರಲ್ಲಿ ಇಂತಹ ಒಂದು ಕತೆಯು ಇಂಗ್ಲೆಂಡಿನಲ್ಲಿಯೂ ನಡೆದಿತ್ತು. ಪ್ರಸಿದ್ಧ ರಾಜಕಾರಣಿಗಳಾಗಿದ್ದ ಮಿ|| ಗ್ಲೇಡ್‌ಸ್ಟನ್ ರವರು ಒಂದು ಚುನಾವಣಾ ಸಭೆಗೆಂದು ಹೋಗುತ್ತಿದ್ದಾಗ ಅನಿರೀಕ್ಷಿತವಾಗಿ ರೊಟ್ಟಿಯ ಮಾಲೆಯೊಂದು ಅವರ ಮೈಮೇಲೆ ಬಿತ್ತು. ಗ್ಲೇಡ್‌ಸ್ಟನರನ್ನು ಅತಿಯಾಗಿ ಗೌರವಿಸುತ್ತಿದ್ದ ವೆಲ್ಶ್ ಸ್ತ್ರೀಯೊಬ್ಬಳು ಮಹಡಿಯ ಮೇಲಿನಿಂದ ಅದನ್ನು ಬಿಸಾಡಿ ತನ್ನ ಪಾಲಿನ ಗೌರವವನ್ನು ತೋರಿಸಿದಳು. ದೌರ್ಭಾಗ್ಯವಶಾತ್ ಆ ರೊಟ್ಟಿಯ ಮಾಲೆ ಗ್ಲೇಡ್‌ಸ್ಟನರ ಮುಖದ ಮೇಲೆ ಬಿದ್ದು ವೇದನೆಯುಂಟಾದುದರಿಂದ ಅವರು ಸಭೆಗೆ ಹೋಗದೆ ಹಿಂತೆರಳಿದರು. ಮತದಾನ ಹಕ್ಕಿಲ್ಲದಿದ್ದರೂ ತನ್ನ ಸಹಾನುಭೂತಿಯನ್ನು ತೋರಿಸಿದ ಲಲನೆಯೊಬ್ಬಳು ಅದನ್ನು ಅವರ ಮೇಲೆ ಹಾಕಿದಳೆಂದು ಯಾರಿಗೂ ತಿಳಿದಿದ್ದಿಲ್ಲ. ಒಂದೇ ದಿನದಲ್ಲಿ "ಗ್ಲೇಡ್‌ಸ್ಟನರು ಜಖಮಾದರು.'' ಎಂಬ ವಾರ್ತೆಯು ಜಗತ್ತಿನ ಎಲ್ಲಾ ಪತ್ರಿಕೆಗಳಲ್ಲಿ ಪ್ರಕಟವಾಯಿತು. ರೊಟ್ಟಿಯ ಪೆಟ್ಟಿನ ಫಲಿತಾಂಶವಿದು!

ooo

## ಗಡ್ಡದ ವೈರಿ ಯುದ್ಧ!

ಜೆಕೊಸ್ಲೊವೇಕಿಯದ ಗೊಂದಲದ ಕಾಲದಲ್ಲಿ ಅದಕ್ಕಿಂತಲೂ ಮಹತ್ವದ ಒಂದು ಸಮಸ್ಯೆಯು ಇಂಗ್ಲೆಂಡಿನಲ್ಲಿ ತಲೆದೋರಿತ್ತು. ವಿಷಗಾಳಿಯಿಂದ ರಕ್ಷಿಸಿಕೊಳ್ಳಲು ಗೇಸ್‌ಮಾಸ್ಕುಗಳನ್ನು ಗಡ್ಡವಿದ್ದವರಿಗೆ ಧರಿಸಿಕೊಳ್ಳಲು ಬಹಳ ಅನನುಕೂಲವಾಯಿತು. ಪ್ರಾಣಬೇಕಾದರೆ ಗಡ್ಡ ತೆಗೆಯಬೇಕು, ಗಡ್ಡ ಬೇಕಾದರೆ ಪ್ರಾಣದಾಶೆತೊರೆಯಬೇಕೆಂಬ ಸಮಸ್ಯೆಯು ಇಂಗ್ಲೆಂಡಿನ ಪಾದ್ರಿ ವರ್ಗವನ್ನು ಬೆದರಿಸಿಬಿಟ್ಟಿತು. ಜಾರ್ಜ್ ಬರ್ನಾರ್ಡ ಷಾರವರು ಪ್ರಾಣ ಹೋದರೂ ಗಡ್ಡ ತೆಗೆಯಲಾರೆನೆಂದು ಹೇಳಿಬಿಟ್ಟರು!

ಚರಿತ್ರೆಯಲ್ಲಿ ಯುದ್ಧ ಮತ್ತು ಗಡ್ಡಗಳ ಸಂಬಂಧದ ಕುರಿತು ಶೋಧನೆ ಮಾಡುವುದಿದ್ದರೆ ಯುದ್ಧ ಪ್ರಾರಂಭವಾಯಿತೆಂದರೆ ಗಡ್ಡಕ್ಕೆ ಸಂಚಕಾರವಾದಂತೆ ಎಂದು ಸ್ಪಷ್ಟವಾಗುತ್ತದೆ. ಅಲೆಕ್ಸಾಂಡರ್ ದಿ ಗ್ರೇಟ್ ಎಂಬವನು ತನ್ನ ಸೈನಿಕರು ಸರ್ವಥಾ ಗಡ್ಡ ವಿಡಬಾರದೆಂಬ ನಿಯಮವನ್ನೇ ಮಾಡಿದ್ದನಂತೆ. ಕಾರಣ ಗಡ್ಡವಿದ್ದರೆ ವೈರಿಗಳು ಬಹಳ ಸುಲಭವಾಗಿ ಅವರನ್ನು ಹಿಡಿದು ದಂಡಿಸುತ್ತಿದ್ದರು. ಇಂಗ್ಲಿಷ್ ಚರಿತ್ರೆಯನ್ನು ನೋಡುವುದಿದ್ದರೆನೋರ್ಮನರುಗಡ್ಡವನ್ನು ಪೂರ್ಣವಾಗಿ ಬೋಳಿಸಿಯೇ ಇಂಗ್ಲೆಂಡನ್ನು ಗೆದ್ದದ್ದೆಂದು ವ್ಯಕ್ತವಾಗುತ್ತದೆ. ಅಲ್ಲಿಯ ನಿವಾಸಿಕರು ತಮ್ಮ ಗಡ್ಡವನ್ನು ನಾರ್ಮನರಿಂದ ಉಳಿಸಿಕೊಳ್ಳುವುದಕ್ಕಾಗಿ ಇಂಗ್ಲೆಂಡಿನಿಂದ ಓಡಿಹೋದರಂತೆ. ಕ್ರೀಮಿಯನ್ ಯುದ್ಧದಲ್ಲಿ ಸೈನಿಕರು ರಷ್ಯದ ಚಳಿಯಿಂದ ತಮ್ಮ ಮುಖವನ್ನು ರಕ್ಷಿಸಿಕೊಳ್ಳಲು ತುಂಬಾ ಗಡ್ಡ ಬೆಳೆಸಿದ್ದರು. ಹಿಟ್ಲರನ ಕಾಲದಲ್ಲಿ ಗಡ್ಡಗಳಿಗೆ ಉಳಿಗಾಲವಿಲ್ಲದಂತಾಗಿದೆ. ಪ್ರಜಾಸತ್ತೆಯನ್ನು ಹಳಿಯುವ ಈ ಕಾಲದಲ್ಲಿ ಗೇಸ್ ಮಾಸ್ಕನ್ನು ಧರಿಸುವ ಆವಶ್ಯಕತೆಯಿರುವುದರಿಂದ ಗಡ್ಡವಂತೂ ಮಾಯವಾಗಲಿದೆ. ಪುಣ್ಯದಲ್ಲಿ ಭಾರತಕ್ಕೆ ಯುದ್ಧಭಯವು ಅಷ್ಟೊಂದು ವಿಶೇಷವಾಗಿದ್ದಿಲ್ಲ. ಇದ್ದಿದ್ದರೆ ಕವಿ ರವೀಂದ್ರರ ಗಡ್ಡಕ್ಕೂ ತೊಂದರೆಯಾಗುತ್ತಿತ್ತು!

ooo

## ದಾಖಲೆ ಮುರಿದ ಲೇಖಾಂಕ!

ಅಮೇರಿಕವೆಂದರೆ ದಾಖಲೆ ಮುರಿಯುವವರ ತವರೂರೆಂಬುದರಲ್ಲಿ ಸಂಶಯವಿಲ್ಲ. ಇತ್ತೀಚೆಗೆ ದಾಖಲೆ ಮುರಿದಿರುವ ಕೀರ್ತಿಯು ಒಂದು ವೃತ್ತಪತ್ರಿಕೆಗೆ ಸಲಬೇಕಾಗಿದೆ. ಕಳೆದ ೨೫ ವರುಷಗಳಿಂದ ಒಂದು ವೃತ್ತ ಪತ್ರಿಕೆಯು "ಹೆಲೆನ್ ಮತ್ತು ವಾರೆನರ ವೈವಾಹಿಕ ಜೀವನ"ವೆಂಬೊಂದು ಲೇಖನವನ್ನು ಪ್ರಕಟಿಸುತ್ತಾ ಬಂದಿದೆ. ವೈವಾಹಿಕ ವಿಚಾರಗಳಲ್ಲಿ ಅಮೇರಿಕದ ಓದುಗ

ರಿಗೆ ಎಷ್ಟೊಂದು ಅಭಿರುಚಿಯಿದೆಯೆಂದು ಇದರಿಂದಲೆ ವ್ಯಕ್ತವಾಗುತ್ತದೆ.

ಒಂದು ಚಲನಚಿತ್ರ ಕಂಪೆನಿಯು ೧೯೧೦ರಿಂದ ೧೯೨೦ರ ತನಕ ವಿನೋದಚಿತ್ರದ ಸೀರಿಯಲನ್ನು ತಯಾರಿಸುತ್ತಾ ಬಂತು. ಈ ಚಿತ್ರವು ಸಮಗ್ರ ಜಗತ್ತಿನಲ್ಲಿ ಜನಪ್ರೀತವಾಯಿತೆಂಬುದಕ್ಕೆ ಅದರ ಮುಖ್ಯ ಪಾತ್ರದಾರನಿಗೆ ಒಂದೊಂದು ರಾಷ್ಟ್ರದಲ್ಲಿ ಒಂದೊಂದು ಹೆಸರು ದೊರಕಿರುವುದೇ ಸಾಕ್ಷಿಯಾಗಿದೆ. ಫ್ರಾನ್ಸಿನಲ್ಲಿ ರಿಗೇಡಿನ್ ಎಂದಿದ್ದರೆ ಇಂಗ್ಲೆಂಡಿನಲ್ಲಿ ಅವನಿಗೆ ವಿಪ್ಪ್ಲ್ಸ್ ಎಂದು ಹೆಸರು. ಜರ್ಮನಿಯಲ್ಲಿ ಮಾರಿಝ್ ಎಂದಾದರೆ ಸ್ಪೈನಿನಲ್ಲಿ ಸೆಲಾಸ್ಟಿಯಾನೊ, ಇಟಲಿಯಲ್ಲಿ ಟಾರ್ಟುಫಿನಿ, ಇತರ ದೇಶಗಳಲ್ಲಿ ಫ್ರೆಂಝ್! ಅಮೇರಿಕವು ಇನ್ನೆಷ್ಟು ರೀತಿಯಲ್ಲಿ ದಾಖಲೆ ಮುರಿಯುತ್ತಿದೆಯೋ ವಿಧಾತನೇಬಲ್ಲ!

ooo

## ಮೈಸೂರಿನ ಹೊಸ ವ್ಯಾಪಾರ.

ಮೈಸೂರಿನಲ್ಲಿ ಮಾದರಿಗಳೇ ಹೆಚ್ಚು. ಇತ್ತೀಚೆಗೆ ಕೆಲವು ವರ್ತಕರು ಒಂದು ಹೊಸ ವ್ಯಾಪಾರವನ್ನು ಮೈಸೂರು ಬೆಂಗಳೂರು ನಗರಗಳಲ್ಲಿ ಪ್ರಾರಂಭಿಸಿ ಇತರರಿಗೊಂದು 'ಮಾದರಿ'ಯನ್ನು ಹಾಕಿಕೊಟ್ಟಿರುತ್ತಾರೆ. ಎಂಜಲೆಲೆಗಳನ್ನು ಪುನಃ ಒಟ್ಟುಗೂಡಿಸಿ, ತೊಳೆದು ಮಾರುವುದೇ ಈ ಮಾದರಿ ವ್ಯಾಪಾರದ ಗುಟ್ಟು! ಪ್ರಾಯಶಃ ಹೊಟೆಲಿನವರಿಗೆ ಇದರಿಂದ ಎಲೆಗಳು ಕಡಿಮೆ ಕ್ರಯಕ್ಕೆ ಸಿಗುವುದರಿಂದ ಅವರು ಅದನ್ನು ಕೊಂಡುಕೊಳ್ಳುತ್ತಿರಬೇಕು. ಈ ಎಲೆಗಳ ಒಳಿತು ಕೆಡುಕುಗಳನ್ನು ಒಮ್ಮೆಗೆ ಮರೆತುಬಿಟ್ಟರೆ, ಈ ಉಪಾಯವನ್ನು ಕಂಡು ಹಿಡಿದ ಮಹಾನುಭಾವನಿಗೆ ಒಂದು ನೊಬೆಲ್ ಬಹುಮಾನವನ್ನು ಕೊಡುವುದು ಅತ್ಯವಶ್ಯವೆನಿಸುವುದಿಲ್ಲವೆ? ಒಟ್ಟಿನ ಮೇಲೆ ವಾಣಿಜ್ಯ ಪ್ರಪಂಚವು ಎಲ್ಲಾ ದೃಷ್ಟಿಯಿಂದಲೂ ಸುಧಾರಿಸುತ್ತಿದೆಯೆಂದಾಯಿತು.

## ಸ್ತ್ರೀಯರ ಸ್ವರ್ಗ.

ಝಾಂಝಿಬಾರ್ ದ್ವೀಪವನ್ನು ಸ್ತ್ರೀಯರ ಸ್ವರ್ಗವೆಂದು ನಿರಾಂತಕವಾಗಿ ಹೇಳಬಹುದಾಗಿದೆ. ಅಲ್ಲಿಯ ಸರಕಾರವು ಪ್ರಕಟಿಸಿರುವ ಹೇಳಿಕೆಗನುಸಾರವಾಗಿ ಹೆಚ್ಚಿನ ಮನೆಗೆಲಸವನ್ನು ಪುರುಷರೇ ಮಾಡುತ್ತಿದ್ದಾರೆಂದು ತಿಳಿಯುತ್ತದೆ. ವಾರಕ್ಕೊಮ್ಮೆ ಬಟ್ಟೆಯೊಗೆಯುವ ಕೆಲಸವು ಕೂಡಾ ಅವರಿಂದಲೇ ಮಾಡಲ್ಪಡುತ್ತಿದೆಯಂತೆ. ಸ್ತ್ರೀಯರಿಗೆ ಈ ದ್ವೀಪದಲ್ಲಿ ಇಷ್ಟೊಂದು ಸುಖವಿದ್ದರೆ ಇದನ್ನು "ಸ್ತ್ರೀಯರ ಸ್ವರ್ಗ"ವೆಂದೇಕೆ ಕರೆಯಬಾರದು?

(೧೧ನೆ ಪುಟದಿಂದ)
ಪಕ್ಷವು ಫ್ರಾನ್ಸ್ ಮತ್ತು ರಷ್ಯಗಳಿಂದ ಸಾಧ್ಯವಿರುವಷ್ಟು ಸಾಧನಗಳನ್ನು ಕೊಂಡುಕೊಂಡಿತು.

## ಬಡಾಜಾರ್ಝ್ ಅತ್ಯಾಚಾರ

ಸ್ಪೈನಿನ ಚರಿತ್ರೆಯಲ್ಲಿ ಬಡಾಜಾರ್ಝ್ ಅತ್ಯಾಚಾರದಷ್ಟು ಭಯಾನಕವಾದುದು ಮತ್ತಾವುದೂ ಇಲ್ಲ. ಜನರಲ್ ಫ್ರೇಂಕೋ ಈ ನಗರದಲ್ಲಿ ಮಾಡಿದ ಅನ್ಯಾಯಕ್ಕೆ ಸರಿಯಾದುದು ಜಗತ್ತಿನಲ್ಲಿ ಇನ್ನೊಂದಿಲ್ಲ. ೮೦೦೦ ಸ್ತ್ರೀಪುರುಷರು ಈ ಸ್ಥಳದಲ್ಲಿ ಕೂಡಿಹಾಕಲ್ಪಟ್ಟರು. ಯುದ್ಧ ಕಣದಿಂದ ಎಳೆದು ತಂದ ಸೈನಿಕರು, ಸಾರ್ವಜನಿಕರೊಂದೆಡೆ, ಮನೆಗಳಿಂದ ನಿಷ್ಕರುಣೆಯಿಂದ ಸೆಳೆದು ತಂದ ತರುಣಿಯರೊಂದೆಡೆ, ಮಕ್ಕಳೊಂದೆಡೆ, ಮುದುಕಿಯರೊಂದೆಡೆ. ದಂಗೆಗಾರ ಸೈನಿಕರು ಸಾರ್ವಜನಿಕವಾಗಿ ವನ್ಯ ಜಂತುಗಳಂತೆ ನಿರ್ಭಾಗ್ಯ ತರುಣಿಯರೊಡನೆ ಸಂಭೋಗದ ನರಕ ಸುಖವನ್ನು ಪಡೆಯಲು ಹಿಂಜರಿಯಲಿಲ್ಲ. ಅಮಾನುಷರಂತೆ ಫ್ರೇಂಕೊನ ಸೈನಿಕರು, ಮಕ್ಕಳು, ಮುದುಕರು ಅಬಲರೆಂಬುದನ್ನು ನೋಡದೆ ಪ್ರಖ್ಯಾತವಾದ ಬುಲ್-ರಿಂಗ್ (Bull-ring) ಎಂಬುದರೊಳಗಿದ್ದ ಸುಮಾರು ೮೦೦೦ ಮಂದಿಯನ್ನು ಮೆಶಿನ್‌ಗನ್‌ಗಳಿಂದ ಗುಂಡೆಸೆದು ಕೊಂದರು. ಅಂತಃಕಲಹದ ಭೀಕರತೆಯು ಇಲ್ಲಿದೆ. ವೈಷಮ್ಯದ ಪರಾಕಾಷ್ಠತೆ! ಕ್ರೂರಾಚಾರದ ಭೀಕರ ನಿದರ್ಶನ! ಇದರಿಂದಾಗಿ ಜನರಲ್ ಫ್ರೇಂಕನನ್ನು ಸಮಗ್ರ ಸ್ಪೈನಿನ ಜನರು ಕಟುವಾಗಿ ದೂಷಿಸಲಾರಂಭಿಸಿದರು.

## ಸೆಪ್ಟೆಂಬರ್ ೪

ಪೆಂಪೆಲೋನದ ಸಮೀಪದಲ್ಲಿರುವ ಫ್ರೆಂಚ್ ಗಡಿಯ ಬಳಿಯಲ್ಲಿ ಸೆಪ್ಟೆಂಬರ್ ೪ರಂದು ದಂಗೆಗಾರರಿಗೂ ಸರಕಾರಕ್ಕೂ ಪ್ರಚಂಡ ಯುದ್ಧವಾಗಿ ಐರನ್ ನಗರವು ದಂಗೆಗಾರರ ಕೈವಶವಾಯಿತು. ಐದು ದಿನಗಳ ಬಳಿಕ ತಾಟಸ್ಥ್ಯ ಸಮಿತಿಯು ಸಭೆ ಸೇರಿತು. ಮೂರೇ ದಿನಗಳ ಬಳಿಕ ಸ್ಯಾನ್ ಸೆಬಸ್ಟಿಯನ್ ಕೂಡಾ ಜನರಲ್ ಫ್ರೇಂಕನದಾಯಿತು.

## ಪುನಃ ಮೇದ್ರಿದ್!

ನಾಲ್ಕೂ ದಿಕ್ಕುಗಳಿಂದ ದಂಗೆಗಾರರು ರಾಜಧಾನಿಯನ್ನು ಮುತ್ತಲೆತ್ನಿಸುತ್ತಿದ್ದರು. ಎಲ್ಲೆಡೆಗಳಲ್ಲಿಯೂ ದಂಗೆಗಾರರ ವಿಜಯ! ಜಗತ್ತು "ಸ್ಪೈನಿನ ಅವಸ್ಥೆಯಾಯಿತು" ಎಂದು ನಿಟ್ಟುಸಿರುಬಿಟ್ಟಿತು. ಪ್ರಾರಂಭದಲ್ಲಿ ಕೆಬಲ್ಲೆರೋ ಸರಕಾರೀ ಪಕ್ಷವು ದಕ್ಷಿಣ ವೆಲೆನ್ಸಿಯಕ್ಕೆ ಹೋಗಿ ಮೇದ್ರಿದನ್ನು ಧೀರ ದಳಪತಿ ಜನರಲ್ ಮಿಯಾಜನ ಆಧೀನಬಿಟ್ಟಾಗ ಉಂಟಾದ ಗೊಂದಲಕ್ಕಿಂತ ಹೆಚ್ಚಿನದು ಪುನಃ ಪ್ರಾರಂಭವಾಯಿತು. ಪ್ರಜಾಸತ್ತೆಯನ್ನುಳಿಸುವುದಕ್ಕಾಗಿ ಪರದೇಶಗಳಿಂದ ಬಂದ ಧೀರ ಯುವಕರು ಮತ್ತು ಡುರ್ರೂಟಿಯ ಪ್ರಖ್ಯಾತ ಸೈನಿಕರು ರಾಜಧಾನಿಯನ್ನು ಉಳಿಸಿಕೊಂಡರು. ಈ ಸೈನಿಕರ ಧೀರಮನೋವೃತ್ತಿಯನ್ನು ವರ್ಣಿಸುವುದು ಶಕ್ಯವಲ್ಲ. ನವಂಬರ ೭ರಿಂದ ಮೇದ್ರಿದಿನ ಅವಸ್ಥೆಯು ಕಠಿನವಾಗಿತ್ತು. ಹಿಟ್ಲರ್-ಮುಸ್ಸೋಲಿನಿಯರು ಫ್ರೇಂಕೊನ ವಿಜಯಗಳನ್ನು ಕಂಡು ಅವನೇ ಸ್ಪೈನಿನ ಅಧಿಕೃತ ಅಧಿಕಾರಿಯೆಂದು ಮಾನ್ಯ ಮಾಡಿದರು. ಇಷ್ಟಾಗುವಾಗ ಸರಕಾರೀ ಪಕ್ಷದ ಆಶಾಜ್ಯೋತಿಯು ಬೆಳಗಿದಂತೆ ರಷ್ಯನ್ ವಿಮಾನವು ಬಂತೇ ಬಂತು!

## ಫ್ರೇಂಕೋ ವಿಜಯ.

ದಶಂಬರ ಕಳೆದೊಡನೆಯೇ ಪ್ರಾರಂಭವಾಯಿತು ಫ್ರೇಂಕೊನ ಚಟುವಟಿಕೆಗಳು. ಉತ್ತರ ದಕ್ಷಿಣಗಳಿಂದ ಸೈನಿಕರು ಹೋರಾಡಿದರು. ವೆಲೆನ್ಸಿಯಾ ಹೆದ್ದಾರಿಯನ್ನು ಹೇಗಾದರೂ ಅಂತರ್‌ರಾಷ್ಟ್ರೀಯ ಸೈನಿಕರು ರಕ್ಷಿಸಿದರು. ಆದರೆ ಫೆಬ್ರವರಿ ೭ರಂದು ಮಲಾಗಾ ನಗರವು ಫ್ರೇಂಕನದಾಯಿತು. ಅಲ್ಲಿಯ ೫೦೦೦ ಮಂದಿ ಗುಂಡಿನ ಬಾಯಿಗೆ ತುತ್ತಾದರು.

## ಪ್ರಥಮ ಪರಾಜಯ.

ಮಾರ್ಚ್ ೧೨ರಂದು ಮೇದ್ರಿದನ್ನು ಕೈವಶಪಡಿಸುವುದಕ್ಕಾಗಿ ಫ್ರೇಂಕೊ ೭೦೦೦ ಇಟಾಲಿಯನ್ ಸೈನಿಕರನ್ನು ಗ್ವಡಾಲಜಾರಾದಿಂದ ನೈಋತ್ಯ ದಿಕ್ಕಿನಿಂದ ರಾಜಧಾನಿಗೆ ಕಳುಹಿಸಿದನು. ಸಂಬಳಕ್ಕಾಗಿ ದುಡಿಯುತ್ತಿದ್ದ ಬಡ ಇಟಾಲಿಯನ್ ಸೈನಿಕರು ತಮ್ಮ ಯುದ್ಧಸಾಧನಗಳನ್ನು ಬಿಟ್ಟು ಪ್ರಾಣವುಳಿಸಿಕೊಳ್ಳುವುದಕ್ಕಾಗಿ ಇಪ್ಪತ್ತು ಮೈಲು ಹಿಂದೋಡಿದರು.

## ಬಾಸ್ಕ್ ಯುದ್ಧ.

ಎಪ್ರಿಲ್ ೧ರಂದು ಜನರಲ್ ಮೋಲಾ ದಂಗೆಗಾರರ ಪರವಾಗಿ ಬಾಸ್ಕ್ ಪ್ರದೇಶದಲ್ಲಿ ಯುದ್ಧ ಮಾ

ಡಿದ. ಈ ಯುದ್ಧ ಕೊನೆಗೊಳ್ಳುವ ಮೊದಲೇ ಅವನು ಬಿಲ್ಬಾವಿನ ಸಮೀಪದಲ್ಲಿ ವಿಮಾನದಿಂದುರುಳಿ ತೀರಿಕೊಂಡನು. ಬಾಸ್ಕಿನ ಕೆಥೊಲಿಕ್ ಜನರು ಪ್ರಾರಂಭದಿಂದಲೂ ಸರಕಾರಕ್ಕೇ ಬೆಂಬಲ ಕೊಡುತ್ತಿದ್ದರು. ಎಪ್ರಿಲ್ ೧ ರಿಂದ ೧೭ ರ ತನಕ ಹೋರಾಡಿ, ಬಿಲ್ಬಾವ್ ನಗರವನ್ನು ರಕ್ಷಿಸಿಕೊಂಡು ಅವರು ಜಗತ್ತಿನ ಪ್ರಶಂಸೆಗೆ ಪಾತ್ರರಾದರು. ಗೆರ್ನೀಸಿಯಾದ ಭಯಾನಕ ಯುದ್ಧವನ್ನು ಜಗತ್ತೇ ಮರೆಯುವಂತಿಲ್ಲ. ಇಷ್ಟಾಗುವಾಗ ಕೇಂದ್ರ ಸರಕಾರದಲ್ಲಿ ಟ್ರಾಟ್ಸ್ಕಿ ಪಕ್ಷದವರು ಸರಕಾರಕ್ಕೆ ವಿರೋಧವಾಗಿ ವರ್ತಿಸಿದರು. ಪೋಲೀಸರು ಈ ಚಿಕ್ಕ ದಂಗೆಯನ್ನು ನಿಲ್ಲಿಸಿದರೂ, ಇದರ ಪರಿಣಾಮವಾಗಿ ಯುದ್ಧ ಮಂತ್ರಿ ಮತ್ತು ಪ್ರಧಾನಸಚಿವರಾದ ಲಾರ್ಗೋ ಕೆಬಲ್ಲೆರೋರವರು ರಾಜಿನಾಮೆಯೀಯಬೇಕಾಯಿತು. ಎಪ್ರಿಲ್- ಜೂನ್ ತಿಂಗಳಲ್ಲಿ ಸರಕಾರವು ಸರಿಯಾದ ಸೈನ್ಯವನ್ನು ವ್ಯವಸ್ಥೆಗೊಳಿಸಿ ಮುಖ್ಯ ಮುಖ್ಯ ನಗರಗಳನ್ನು ಕೈವಶಪಡಿಸಿಕೊಂಡಿತು



## ಒಂದು ವರುಷ ಕಳೆಯಿತು.

ಹೀಗೆ ಒಂದು ವರುಷ ಕಳೆಯಿತು. ಅಂತರ್‌ರಾಷ್ಟ್ರೀಯ ನೀತಿಯ ಪೊಳ್ಳುತನವು ಜಗತ್ತಿಗರಿಯಿತು. ಪ್ರಜಾಸತ್ತೆಯ ಶುಷ್ಕತೆಯು ಜನತೆಗೆ ತಿಳಿಯಿತು. ಸ್ವಾತಂತ್ರ್ಯರಕ್ಷಣೆಗಾಗಿ ಹೋರಾಡುತ್ತಿರುವ ಸ್ಪಾನಿಷ್ ಜನರ ಧೈರ್ಯದ ಯೋಗ್ಯಾಯೋಗ್ಯತೆಯನ್ನು ಜಗತ್ತು ಮನಗಂಡಿತು. ಇಷ್ಟಾಗುವಾಗ ಬ್ರಿಟಿಷರ ತಾಟಸ್ಥ್ಯ ಧೋರಣೆಯಿಂದಾಗಿ ಸ್ಪೈನಿನ "ವಿದೇಶೀ ಸ್ವಯಂಸೇವಕರು" ಹೊರಗೆಹೋಗಬೇಕೆಂಬ ಸೂಚನೆ ಮುಂದೆ ಬಂತು.



## ನಿಗೂಢ ಸಬ್ ಮೇರಿನುಗಳು!

ಆಗಸ್ಟ್ ೨೫ರಂದು ಸೆಂಟಾಂಡರ್ ಎಂಬುದು ದಂಗೆಗಾರರ ಅಧೀನಕ್ಕೆ ಬಂದರೂ ಸೆಪ್ಟಂಬರದಲ್ಲಿ ಸರಕಾರೀ ಪಕ್ಷವು ಬೆಲ್ಚಾಯ್ಟ್ ಎಂಬ ನಗರವನ್ನು ಕೈವಶಪಡಿಸಿಕೊಂಡಿತು. ಇಷ್ಟರಲ್ಲಿ ಯುದ್ಧವು ಭಯಂಕರವಾಗುತ್ತಿತ್ತು. ಆದರೆ ಭೂಮಧ್ಯ ಸಮುದ್ರದಲ್ಲಿ ಕೆಲವು ನಿಗೂಢ ಸಬ್‌ಮೆರೀನುಗಳು ಬ್ರಿಟಿಷ್ ಹಡಗಗಳನ್ನು ಮುಳುಗಿಸಲಾರಂಭಿಸಿದುವು. ಹಲವು ಹಡಗಗಳು ನೀರುಪಾಲಾಗುವಾಗ ಬ್ರಿಟಿಷರಿಗೆ ಎಚ್ಚರವಾಗಿ ಸೆಪ್ಟಂಬರ ೪ರಂದು ನಿಯೋನ್ ಎಂಬಲ್ಲಿ ಒಂದು ಪರಿಷತ್ತಾಗಿ ಭೂಮಧ್ಯ ಸಮುದ್ರದಲ್ಲಿ ಹಡಗು ಕಳ್ಳತನವನ್ನು ನಿಲ್ಲಿಸುವ ಏರ್ಪಾಡಾಯಿತು.



ಸರಕಾರೀ ಪಕ್ಷದ ಸೈನಿಕನನ್ನು ಸೆರೆಹಿಡಿದ ದಂಗೆಗಾರನೊಬ್ಬನು ಮುಷ್ಟಿಪ್ರಹರ ಮಾಡುತ್ತಿರುವುದು.



## ಎರಡು ಸ್ಪೈನುಗಳು.

ಈಗ ಸ್ಪೈನ್ ಎರಡು ಪಾಲಾಗಿದೆ. ದಂಗೆಗಾರರು ಹೆಚ್ಚಿನಂಶವನ್ನು ಪಡೆದಿದ್ದರೂ ಹೆಚ್ಚಿನ ಜನರು ಸರಕಾರೀ ಭೂಮಿಯಲ್ಲಿದ್ದರು. ಬಾರ್ಸೆಲೋನಾದಲ್ಲಿದ್ದ ಸರಕಾರವು ಸುಮಾರು ೩,೦೦೦,೦೦೦ ಸ್ತ್ರೀಪುರುಷರಿಗೆ ಆಶ್ರಯವನ್ನು ಕೊಟ್ಟಿತು. ಉತ್ತರ ಸ್ಪೈನು ದಂಗೆಗಾರರಿಗೆ ದೊರಕಿದೊಡನೆ ಬ್ರಿಟಿಷ್ ಸರಕಾರವು ಕೂಡಾ ತನ್ನ ರಾಯಭಾರಿಯನ್ನು (ಸರ್ ರಾಬರ್ಟ್ ಹಾಜಾರ್ಸ್) ಸಲಮ್ಯಾಂಕಾ ನಗರಕ್ಕೆ ಕಳುಹಿಸಿ ಜನರಲ್ ಫ್ರೇಂಕನ ಅಧಿಕಾರವನ್ನು ಮಾನ್ಯಮಾಡಿತು.

## ಸಮುದ್ರ ತೀರವನ್ನುಸೇರಿದರು.

ದಶಂಬರ ೧೯೩೭ ರಷ್ಟಕ್ಕೆ ವಿದ್ರೋಹಿಗಳು ಸಮುದ್ರ ತೀರದೆಡೆಯ ತನಕ ಯಶಸ್ವಿಯಾಗಿ ತಮ್ಮ ಧಾಳಿಯನ್ನು ನಡೆಸಿದರು. ಸರಕಾರೀ ಪಕ್ಷದ ಸೋಲಿಗೆ ಹಲವು ಕಾರಣಗಳಿವೆ. ಯುದ್ಧ ಮಂತ್ರಿ ಇಂಡೆಲಾಸಿಯೋ ಪ್ರೀಟೋ ಎಂಬವರ ಧೋರಣೆಯಿಂದ ಹಲವು ರಾಜಕೀಯ ವ್ಯಕ್ತಿಗಳು ಗಡೀಪಾರು ಮಾಡಲ್ಪಟ್ಟದ್ದರಿಂದ ಸಂಘಟನೆಯ ಶಕ್ತಿಯು ಕುಗ್ಗಿತು. ಅಲ್ಲದೆ ಜರ್ಮನಿ

ಇಟಲಿಗಳು ಫ್ರೇಂಕೊನಿಗೆ ಬೇಕಷ್ಟು ಬೆಂಬಲವನ್ನಿತ್ತುವು. ೧೯೩೮ ಎಪ್ರಿಲ್ ತಿಂಗಳಲ್ಲಿ ಕೆಟಲೋನಿಯ ಹೋಯಿತು. ಲೆಂಡಾ ನಗರವನ್ನು ಸರಕಾರವು ಕಳೆದುಕೊಂಡಿತು. ಯುದ್ಧ ಮಂತ್ರಿ ಪ್ರೀಟೋ ರಾಜಿನಾಮೆಯಿತ್ತರು. ಎಪ್ರಿಲ್ ೧೬ರಂದು ಆಂಗ್ಲ-ಇಟಾಲಿಯನ್ ಒಪ್ಪಂದವಾಯಿತು. ಬಾರ್ಸೆಲೋನದ ಸಾರ್ವಜನಿಕರನ್ನು ಇಟಾಲಿಯನ್ ವಿಮಾನಗಳು ಬಾಂಬೆಸೆದು ಸುಟ್ಟವು. ಹಲವು ಬಾರಿ ಬ್ರಿಟಿಷ್ ಹಡಗಗಳು ಮುಳುಗಿಸಲ್ಪಟ್ಟರೂ ಬ್ರಿಟಿಷ್ ಮಂತ್ರಿಮಂಡಲದ ವರ್ತಕ ಧೋರಣೆಯು ಅವೆಲ್ಲವನ್ನೂ ಸಹಿಸಿಕೊಂಡಿತು.

**ಇನ್ನೂ ಕೊನೆಗೊಳ್ಳಲಿಲ್ಲ.**

ಮೊನ್ನೆ ಮೊನ್ನೆ ತಾಟಸ್ಥ್ಯ ಧೋರಣೆಗನುಸಾರವಾಗಿ, ಇಟಾಲಿಯನ್ ಸೈನಿಕರು ಸ್ಪೈನಿನಿಂದ ಹೊರಗೆ ಹೋಗಿದ್ದಾರೆ; ಅವರು ಹೊರಗೆ ಹೋಗುವ ಮೊದಲೇ ಪ್ರಧಾನರಾದ ಸೀನರ್ ನೆಗ್ರಿನ್‌ರವರು ಅಂತರ್ ರಾಷ್ಟ್ರೀಯ ಸೈನಿಕರನ್ನು ಸ್ಪೈನಿನಿಂದ ಹೊರಗೆ ಕಳುಹಿಸಿದ್ದಾರೆ. ಸ್ಪೈನಿಷ್ ಯುದ್ಧವು ಬೇಗನೆ ಮುಗಿಯುವ ಸಂಜ್ಞೆಗಳು ಕಂಡು ಬರುವುದಿಲ್ಲ. ಫ್ರೇಂಕೋ ಪಕ್ಷವು ಇನ್ನೂ ಹೋರಾಡುತ್ತಿದೆ. ಸರಕಾರೀ ಪಕ್ಷವು ಬಹಳ ಧೈರ್ಯದಿಂದ ಯುದ್ಧ ಮಾಡುತ್ತಿದೆ. ಸ್ಪೈನಿನ ಯುದ್ಧದಲ್ಲಿ ಯಾರು ಜಯಿಸುವರೆಂದು ಹೇಳುವುದು ಬಹಳ ಪ್ರಯಾಸವಾಗಿದೆ.

---

## NOTICE

SRI K. S. UDPA, Koteshwar has ceased to be the authorised agent for the sale of ANTARANGA after the first week of November 1938. Our readers are requested to communicate directly to this Office regarding the supply of the copies of the magazine from the said period until further notice.

*Circulation Manager,*
**ANTARANGA,**
**UDIPI.**



# ಕೊಡಗಿನ ಕುಡಿಯರು ಮತ್ತು ಅವರ ನಡೆ ನುಡಿಗಳು



ಬರೆಹಗಾರರು:

**ಶ್ರೀ. ತಿರುಮಲೇಶ, ಆಲಂಗಾರು.**

---

**ುಡಿಯರ ಸತ್ಯಸಂಧತೆ.**

ಕೊಡಗಿನ ಹೆಚ್ಚಿನ ಭಾಗವು ದೊಡ್ಡ ದೊಡ್ಡ ಡುಗಳಿಂದ ಕೂಡಿದ್ದಾಗಿರುತ್ತದೆ. ಈ ಕಾಡುಗಳಲ್ಲಿ ಲ್ಲಲ್ಲಿ ಯೇಲಕ್ಕಿ ತೋಟಗಳನ್ನು ಮಾಡುತ್ತಾರೆ. ಲ್ಲದೆ ಕಾಫಿ ತೋಟವನ್ನೂ ಮಾಡುತ್ತಾರೆ. ಈ ಕಾಡು ಳಲ್ಲಿ 'ಕುಡಿಯ'ರೆಂಬುವ ಒಂದು ಜಾತಿಯ ಮನುಷ್ಯರು ಾಸಿಸಿಕೊಂಡಿರುತ್ತಾರೆ. ಇವರು ಅಲ್ಲಲ್ಲಿ ಇರುವವರಲ್ಲದೆ ಲ್ಲರೂ ಒಂದೇ ಕಡೆ ಇರುವುದಿಲ್ಲ. ಇವರಿಗೆ ಭೂತ ಶಾಚಿಗಳು ಅಂದರೆ ದೇವರಿಂದಲೂ ಹೆಚ್ಚು ಭಕ್ತಿ. ವರು ಒಳ್ಳೆ ಬಲಶಾಲಿಗಳು. ಬೇಟೆಯಲ್ಲಿ ಬಲು ತುರರು. ಅಲ್ಲದೆ ಬರೇ ಸಾಧುಗಳು, ಕ್ರೂರಿಗಳಲ್ಲ. ವರನ್ನು ನೋಡುವಾಗಲೇ ಸಾಧುಗಳೆಂದು ತೋರುತ್ತದೆ. ವರ ನೋಡುವಿಕೆಯಂತೆ ಇವರ ಗುಣ. ಇವರು ಸುಳ್ಳು ೇಳುವುದೆಂಬುದನ್ನು ಅರಿಯರು, ಸತ್ಯವಂತರು. ುಳ್ಳು ಹೇಳುವುದೆಂದರೆ ಬಲು ದೊಡ್ಡ ಪಾಪವೆಂದು ವರ ನಂಬಿಕೆ. ಇವರಲ್ಲಿ ಸ್ವಾಮಿಭಕ್ತಿ ಚೆನ್ನಾಗಿದೆ. ಟ್ಟನನ್ನು ನಂಬಿದರೆಂದರೆ ಕೊನೆಯತನಕವೂ ಅವನನ್ನೇ ನಂಬುವುದಲ್ಲದೆ ಸ್ವಾಮಿಗಾಗಿ ಯಾ ಆತನ ಕಾರ್ಯಕ್ಕಾಗಿ ಪ್ರಾಣ ಕೊಡಲೂ ಸಿದ್ಧರಾಗಿರುವರು.



**ಬಟ್ಟೆಬರೆಗಳ ವೈಶಿಷ್ಟ್ಯ.**

ಇವರು ಹೆಚ್ಚಿನ ಮಟ್ಟಿಗೆ ಸುಂದರ ಪುರುಷರು. ಇವರ ವೇಷ ಭೂಷಣಗಳು ಅಂತೆಯೇ ಏನೊಂದು ವಿಕಾರದ್ದಲ್ಲ. ತಾವು ಧರಿಸುವ ಬಟ್ಟೆಗಳನ್ನು ನಿರ್ಮಲವಾಗಿ ಇಟ್ಟುಕೊಳ್ಳುವರು. ಗಂಡಸರು ಅಂಗಿ ಇಜಾರು ಹಾಕಿ ತಲೆಗೊಂದು ಬಟ್ಟೆಯನ್ನು ಕಟ್ಟಿಕೊಳ್ಳುವರು. ತಲೆಯನ್ನು ಬೋಳಾಗಿ ಬೋಳಿಸಿ ಎದುರಿಗೆ ಮಾತ್ರ ಸ್ವಲ್ಪ ಕೂದಲನ್ನು ಕೆಳಗೆ ಇಟ್ಟುಕೊಳ್ಳುವರು. ತಲೆಗೆ ಬಟ್ಟೆ ಕಟ್ಟದೆ ಅಂಗಳಕ್ಕೆ ಸಮೇತ ಇಳಿಯಲಾರರು. ಇನ್ನಿವರ ಹೆಂಗುಸರು ಬಟ್ಟೆಯುಡುವ ರೀತಿಯೇ ಪ್ರತ್ಯೇಕ. ಎಷ್ಟು ಉದ್ದ ಬಟ್ಟೆಯಾದರೂ ಸರಿ. ಅದನ್ನು ಸೊಂಟಕ್ಕೆ ಸುತ್ತಿ ಹೆಗಲಿನಲ್ಲಿ ಹಿಂದಿನಿಂದ ಒಂದು ತುದಿ, ಮುಂದಿನಿಂದ ಒಂದು ತುದಿ ತಂದು ಕಟ್ಟುವರು. ಅಲ್ಲದೆ ಇಡೀ ಕೈ ಮುಚ್ಚುವ ರವಕೆಯನ್ನು ಹಾಕಿ ತಲೆಗೊಂದು

ಬಟ್ಟೆಯನ್ನು ಕಟ್ಟಿಕೊಳ್ಳುವರು. ಇದನ್ನು ಕಟ್ಟದೆ ಇರುವದನ್ನು ನೋಡುವುದು ಬಲು ಅಪರೂಪ.



**ಕಾಡು ನಾಡಿನಂತೆ!**

ಇವರ ಭಾಷೆಯು ಹೆಚ್ಚಿನ ಮಟ್ಟಿಗೆ ಮಲೆಯಾಳ ಮತ್ತು ಕನ್ನಡ ಬೆರತು ಕೊಂಡಿರುತ್ತದೆ. ಇವರ ಆಚಾರ ವಿಚಾರಗಳು ಹೆಚ್ಚಿನ ಮಟ್ಟಿಗೆ ಕೊಡಗರಂತೆಯೇ ಆಗಿರುತ್ತವೆ. ಇವರು ಕಾಡುಗಳಲ್ಲಿ ತಿರುಗುವುದೆಂದರೆ ನಾವು ರಸ್ತೆಯಲ್ಲಿ ನಮ್ಮೂರಲ್ಲಿ ತಿರುಗಾಡುವಂತೆ. ಇವರ ಕೈಗೊಂದು ಕೋವಿ ದೊರೆತರೆ ಸರಿ. ರಾತ್ರಿ ಹಗಲೆನ್ನದೆ ಕಾಡನ್ನು ಒಬ್ಬೊಬ್ಬರಾಗಿಯೇ ಸುತ್ತುವರು. ಒಳ್ಳೇ ಕಷ್ಟ ಸಹಿಷ್ಣುಗಳು. ಇವರು ರಾತ್ರೆ ಕಾಡಿನಲ್ಲಿ ಒಂದು ಕಡೆಯಿಂದ ಇನ್ನೊಂದು ಕಡೆ ಎಷ್ಟು ದೂರವಾದರೂ ಹೋಗುವರು. ಆದರೆ ಕೈಯಲ್ಲೊಂದು ಬೆಂಕಿ ಇರುವ ಕಟ್ಟಿಗೆಯ ಕೊಳ್ಳಿ ಇರಬೇಕು.



**ಕುಡಿಯರ ದುಡಿ.**

ಇವರು ಈಗ ಅಲ್ಲಲ್ಲಿರುವ ಏಲಕ್ಕಿ ತೋಟದಲ್ಲಿ ಇರುವರು. ಮಳೆಗಾಲದಲ್ಲಿ ಆಯಾ ಸ್ಥಳದವರು ಅಲ್ಲಲ್ಲಿರುವ ಏಲಕ್ಕಿ ತೋಟದಲ್ಲಿರುವ ಕೆಲಸಕ್ಕೆ ಹೋಗುವರು. ಇನ್ನುಳಿದ ಸಮಯ ಕಾಡಲ್ಲಿರುವ ಬೈನೆಕಟ್ಟೆ ಕಳ್ಳು ತೆಗೆದು ಅದರಿಂದಲೇ ತಮ್ಮ ಜೀವಮಾನವನ್ನು ಕಳೆಯುವರು. ಬೈನೆ ಕೆಲಸವನ್ನು ಹೆಚ್ಚಾಗಿ ಹೆಂಗಸರೇ ಮಾಡುವರು. ಗಂಡಸರಂತೆ ಮರ ಹತ್ತುವುದರಲ್ಲಿ ಇವರ ಹೆಂಗಸರು ಬಲು ಜಾಣರು. ಇವರು 'ದುಡಿ'ಯೆಂಬ ಒಂದು ವಾದ್ಯವನ್ನು ಬಲು ಚೆನ್ನಾಗಿ ಬಾರಿಸುವರು. ಇದು ಹೆಚ್ಚಿನ ಮಟ್ಟಿಗೆ ಹೊಲೆಯರ ಹತ್ತಿರವಿರುವ ದುಡಿಗೆಯಂತಿದೆ. ಆದರೆ ಹೊಲೆಯರು ಬಡೆಯುವ ರೀತಿಯು ಪ್ರತ್ಯೇಕ. ಇವರು ಇದನ್ನು ತಮ್ಮ ಆನಂದ ಸಮಯದಲ್ಲಿ ಒಂದು ರೀತಿ ಹೊಡೆಯುವರು; ಮದುವೆಯ ಸಮಯ ಒಂದು ತೆರ ಹೊಡೆಯುವರು; ಸತ್ತ ಸಮಯ ಒಂದು ತೆರನಾಗಿ ಹೊಡೆಯುವರು. ಅವುಗಳಪೈಕಿ ಇವರು ಆನಂದದ ಸಮಯದಲ್ಲಿ ಹೊಡೆಯುವುದೇ ಕೇಳಲು ಬಲು ಇಂಪು.



**ಕುಣಿತದ ಸೊಗಸು.**

ಇವರು ದುಡಿ ಹೊಡೆಯಲು ವೊದಲು ಮಾಡಬೇಕಿದ್ದರೆ ಪ್ರಥಮತಃ ಸೇಂದಿ ಚೆನ್ನಾಗಿ ಕುಡಿಯಬೇಕು. ಆ ಮೇಲೆ ಇವರು ದುಡಿ ಹೊಡೆದು, ಹಾಡು ಹಾಡಿ, ಕುಣಿಯಲು ವೊದಲು ಮಾಡಿದರೆಂದರೆ ಮತ್ತವರಿಗೆ ಯೋಚನೆ ಯೋಚನೆ ಇಲ್ಲ ಎಂಬಂತೆ ತೋರುತ್ತದೆ. ಅವರ ಆ ಹಾಡಿನ ಸ್ವರ, ಆ ಕುಣಿತದ ಮಾದರಿ, ದುಡಿಯ ಪೆಟ್ಟು ಇವೆಲ್ಲವೂ ಬಲು ಸೊಗಸಾಗಿವೆ. ಅವರು ಕುಣಿದು ಕುಣಿದು ನಿಂತ ನಂತರವಾಗಲಿ, ಇಲ್ಲವೆ ಆದರ ವೊದಲು ಅವರು ಆ ದುಡಿಗೆ ಬಡೆದು ಹಾಡು ಹೇಳುವ ರೀತಿಯಲ್ಲಾಗಲೀ ಇರುವ ಆನಂದವನ್ನು ಕೇಳಿಯೇ ಅನುಭವಿಸಬೇಕಲ್ಲದೆ ಬರೆದು ಸಾಧ್ಯವಿಲ್ಲ.



**ಹುತ್ತರಿ ಹಬ್ಬ.**

ಇವರು 'ಹುತ್ತರಿ ಹಬ್ಬ'ವನ್ನು ಬಲು ದೊಡ್ಡ ಹಬ್ಬವೆಂದು ತಿಳಿದುಕೊಳ್ಳುತ್ತಾರೆ. ಇವರಿಗೆ ವರ್ಷವು ಕೂಡ ಇದರಿಂದಲೇ ಎಣಿಕೆ. ಒಂದು ಹುತ್ತರಿಯಿಂದ ಇನ್ನೊಂದು ಹುತ್ತರಿಗೆ ಎಂದು. ಇದಲ್ಲದೆ ಇನ್ನೂ ಕೆಲವು ಚಿಕ್ಕ ಹಬ್ಬಗಳಿವೆ. ಈ ಹುತ್ತರಿಹಬ್ಬದ ದಿನ ಅವರು ಹಲವರು ಸೇರಿ ಒಂದು ಗುಂಪಾಗಿ ಕೂಡಿಕೊಂಡು ತಮ್ಮ ದುಡಿಗಳನ್ನು ಹಿಡಿದುಕೊಂಡು ಮನೆ ಮನೆಗೆ ಹೋಗಿ ಹಾಡು ಹೇಳಿ ಕುಣಿಯುವರು. ಅದರಲ್ಲಿ ಹಲವು ತರದ ಪದಗಳಿವೆ. ಅವುಗಳಲ್ಲಿ ಒಂದು ತರದ ಪದವನ್ನು ಅವರಿಂದ ಆಯ್ದು ಇಲ್ಲ ಕೊಟ್ಟಿರುತ್ತೇನೆ. ಈ ಪದವನ್ನು ಇದರಲ್ಲಿ ಬರೆದಂತೆಯೇ ಓದಬೇಕು. ಹೆಚ್ಚುಕಡಿಮೆ ಮಾಡಿದಲ್ಲಿ ತಾಳಕ್ಕೆ ಸರಿಯಾಗಿ ಕೂಡಲಾರದು:—

## ಕೊಡಿಚಿ ಪದ

ಚೆಂಡ್ ಕಡಿಯೋಂಡ ಚಾತಂಗೊಡ್ಚಿ
ಚಾತಂಗೊಡಿಚ್ಯೋರ್ ಚಾಣತ್ ಮಚ್ಚಿ
ಚೆಂಡ್ ಕಡಿಯೋಂಡ ಚಾತಂ ಗೊಡ್ಚಿ
ಚಾತಂ ಗೊಡಿಚ್ಯೋರ್ ಬೋಜ ಕೊಡಿಚಿ
ಕೆಂಗಣ್ಣಾ ಕೋಕೇರಿ ಚೇನಂ ಗೊಡಿಚಿ
ಚೇನಂ ಗೊಕ್ಚ್ಯೋರ್ ಬೋಜ ಕೊಡಿಚಿ
ಮಾದರ್ ಕೈಕಾಡ್ ಬೊಳ್ಳಂ ಗೊಡಿಚಿ
ಬೊಳ್ಳಂ ಗೊಡ್ಚ್ಯೋರ್ ಬೋಜ ಕೊಡಿಚಿ
ಕೀಚಿ ಕಿರಾಂಡಾಡ್ ಅಣ್ಣಿ ಕೊಡಿಚಿ
ಅಣ್ಣಿ ಕೊಡ್ಚ್ಯೋರ್ ಚಾಣಕ್ ಮಚ್ಚಿ
ಕೀಚಿಕಿರ್‌ಂಡಾಡ್ ಅಣ್ಣಿ ಕೊಡಿಚಿ

ಅಣ್ಣಿ ಕೋಡ್ಡ್ಯೋರ್ ಬೋಜ ಕೊಡಿಚಿ
ಬಟ್ಟೆತ್ತ ಬಾವಾಲಿ ಮೂಕಂ ಕೊಡಿಚಿ
ಮೂಕಂ ಗೊಡ್ಡ್ಯೋರ್ ಔಣತ್ ಮಚ್ಚಿ
ಬಟ್ಟೊತ್ತ ಬಾವಲಿ ಮೂಕಂ ಗೊಡಿಚಿ
ಮೂಕಂ ಗೊಡ್ಡ್ಯೋರ್ ಬೋಜ ಕೊಡಿಚಿ
ಕೋಲ ಕೊಣಿಂಜೇರಿ ಕಾದಿ ಕೊಡಿಚಿ
ಕಾದಿ ಕೊಡ್ಡ್ಯೋರ್ ಚಾಣತ್ ಮೆಚ್ಚಿ
ಕೋಲ ಕೊಣಿಂಜೇರಿ ಕಾದಿ ಕೊಡಿಚಿ
ಕಾರಿ ಕೊಡ್ಡ್ಯೇರ್ ಬೋಜಂ ಕೊಡಿಚಿ
ಬಾಲ ಬಲಂಬೇರಿ ಕೋಟಿ ಕೊಡಿಚಿ
ಕೋಟಿ ಕೊಡ್ಡ್ಯೋರ್ ಚಾಣತ್ ಮಚ್ಚಿ
ಬಾಲ ಬಲಂಬೇರಿ ಕೋಟಿ ಕೊಡಿಚಿ
ಕೋಟಿ ಕೊಡ್ಡ್ಯೋರ್ ಬೋಜ ಕೊಡಿಚಿ
ತಣ್ಣಾ ಬಲಂಬೇರಿ ಚೈಯಂ ಗೊಡಿಚಿ
ಚೈಯ್ಯಂ ಗೊಡ್ಡ್ಯೋರ್ ಬೋಜ ಕೊಡಿಚಿ
ಪೊದ್ದ್ ನಾಟೂರೊಂಡ ತಾರೆ ಕೊಡಿಚಿ
ತಾರೆ ಕೊಡ್ಡ್ಯೇರ್ ಬೋಜ ಕೊಡಿಚಿ
ಪೊದ್ದ್ ಪೊದವಾಡ್ ಚಾರಿ ಕೊಡಿಚಿ
ಚಾರಿ ಕೊಡ್ಡ್ಯೋರ್ ಚಾಣತ್ ಕೊಡಿಚಿ
ಪೆದ್ದ್ ಪೊದವಾಡ್ ಚಾರಿ ಕೊಡಿಚಿ
ಚಾರಿ ಕೊಡ್ಡ್ಯೋರ್ ಬೋಜ ಕೊಡಿಚಿ
ಬಾಳೆ ನೂರಂಬಡ ಓಂಜ ಕೊಡಚಿ
ಓಂಜ ಕೊಡ್ಡ್ಯೋರ್ ಬೋಜ ಕೊಡಿಚಿ
ಬಿಟ್ಟ ನೆಲಜೊಂಡ ಕೋಟಿ ಕೊಡಿಚಿ
ಕೋಟಿ ಕೊಡ್ಡ್ಯೋರ್ ಚಾಣತ್ ಮೆಚ್ಚಿ
ಬಿಟ್ಟ ನೆಲಜೋಂಡ ಕೋಟಿ ಕೊಡಿಚಿ
ಕೋಟಿ ಕೊಡ್ಡ್ಯೋರ್ ಬೋಜ ಕೊಡಿಚಿ
ಬಲ್ಲತ್ ಪೇರೊಂಡ ತೋಲಂ ಗೊಡ್ಚಿ
ತೊಲು ಗೊಡ್ಡ್ಯೋರ್ ಬೋಜ ಕೊಡಿಚಿ
ಬಲ್ಲತ್ ಪೇರೊಂಡ ತೋಲಂ ಗೊಡ್ಚಿ
ತೋಲಂ ಗೊಡ್ಡ್ಯೋರ್ ಬೋಜ ಕೊಡಿಚಿ
ಕಾನತ್ ಮೂನಾಡ್ ಬೋನಿ ಕೊಡಿಚಿ
ಬೋನಿ ಕೊಡಿಚ್ಯೋರ್ ಚಾಣತ್ ಕೊಡಿಚಿ
ಕಾನತ್ ಮೂನಾಡ್ ಬೋನಿ ಕೊಡಿಚಿ
ಬೋನಿ ಕೊಡಿಚ್ಯೋರ್ ಬೋಜ ಕೊಡಿಚಿ
ಕುಂಜೇರಿ ನಾಡೋಂಡ ಮುಂಡಂ ಗೊಡ್ಚಿ
ಮುಂಡಂ ಗೊಡ್ಡ್ಯೋರ್ ಚಾಣತ್ ಮೆಚ್ಚಿ
ಕುಂಜೇರಿ ನಾಡೊಂಡ ಮುಂಡಂ ಗೊಡ್ಚಿ
ಮುಂಡಂ ಗೊಡಿಚ್ಯೋರ್ ಬೋಜ ಕೊಡಿಚಿ
ಕಲ್ಲ್ ಮಾಟೂರೊಂಡ ಅಮ್ಮಂ ಗೊಡಿಚಿ
ಅಮ್ಮಂ ಗೊಡಿಚ್ಯೋರ್ ಚಾಣತ್ ಮೆಚ್ಚಿ
ತಲ್ಲ್ ಮಾಟುರೊಂಡ ಅಮ್ಮಂ ಗೊಡಿಚಿ
ಅಮ್ಮಂ ಗೊಡಿಚ್ಯೋರ್ ಬೋಜ ಕೊಡಿಚಿ
ಬೊಳ್ಳ್ ಮಾಟೂರೋಂಡ ಮಾತಂ ಗೊಡಿಚಿ
ಮಾತಂ ಗೊಡಿಚ್ಯೋರ್ ಚಾಣತ್ ಮೆಚ್ಚಿ
ಬೊಳ್ಳ್ ಮಾಟೂರೋಂಡ ಮಾತಂ ಗೊಡಿಚಿ
ಮಾತಂ ಗೊಡಿಚ್ಯೋರ್ ಬೋಜ ಕೊಡಿಚಿ

ಇದು ಕೊಡಿಚಿಯನ್ನು ಪ್ರಾರ್ಥಿಸುವ ಪದ. ಇನ್ನು ಮುಂದಿನ ಸರ್ತಿಗೆ ಕೊಡಚಿಯು ಪ್ರತ್ಯಕ್ಷವಾಗುವ ಸಂತೋಷದಿಂದ ಅವರು ಕುಣಿದು ಹಾಡುವ ಪದವನ್ನು ಸಂಗ್ರಹಿಸುವೆನು.

# ಈ ವಾರದ ಪಂಚಾಂಗ

**ಬಹುಧಾನ್ಯ ಸಂ|ರದ ಕಾರ್ತಿಕ ಕೃಷ್ಣಪಕ್ಷ ದಕ್ಷಿಣಾಯನಂ**

**ತುಲಾ ೨೭ರಿಂದ ವೃಶ್ಚಿಕ ೩ರ ವರೆಗೆ. ಮಹಾನಕ್ಷತ್ರ ವಿಶಾಖಾ. ನವಂಬರ, ೧೩೯೮**

## ಆರ್ಯಭಟ ವಾಕ್ಯಕರಣರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 13 | ೬ | ರ೨೬\|\|\| | ಪೂ೨ಉಪ೫೬ | ಶು೨೭\| | ವ೨೬\|\|\| | ೨೦॥ | ಶೆ\|ಅ೪೩ | ಪ್ರದೋಷಃ |
| 14 | ೭ | ಚ೨೧ | ಆ್ಲ೫೪ | ಶ್ಲ೧೯\|\| | ಬ೨೧ | ೨೭\|\|\| | ೫೦ | ಸಿಂಹೆಚ ೫೪ಹ್ತ೪ಕು೪೧ಜ್ಯೈ೧ಬು೦† |
| 15 | ೮ | ಕು೧೫\|\| | ಮ೫೦॥ | ಬ್ರ೧೨ | ಕೌ೧೫॥ | ೨೨\| | ೪೪\|\|\| | ಆ್ನ೧ವಶುಂ [†ಕಾ. ಸೋಮವಾರ |
| 16 | ೯ | ಬು೧೦\|\| | ಹು೪೭॥ | ಐ೫॥ ಉಪ೫೩\| | ಗ೧೦॥ | ೯॥ | ೩೨\| | ವೃಶ್ಚಿಕಸಂಕಮಃ೮। ಜ್ಯೈ೨ಬು೨೫೯ |
| 17 | ೧೦ | ಗು೬ | ಉ್ತ೪೫। | ವ್ಯ೫೨\| | ಭ೬ | ೪\|\|\| | ೨೮ | ಕನ್ಯಾಚ೨ [§ಪಶ್ಚಾದಸ್ತಂ ಶುಕ್ರಃ |
| 18 | ೧೧ | ಶು೨\|\|ಉಪ ೫೭॥ | ಹ್ತ೪೪\| | ಪ್ರಿ೪೬ | ಬಾ೬॥ | ೫\|\|\| ೩\|\|ವಿ | ೨೯\|\| | ಜ್ಯೈ೩ಬು೫೫ ಸರ್ವೇಷಾಮೇಕಾದಶೀ [‡ ಶನಿಪ್ರದೋಷಃ |
| 19 | ೧೩ | ಶ೫೮॥ | ಚಿ೪೪ | ಆ೪೨\|\|\| | ಗ೨೯\| | ೫೮ | ೨೮ | ಅನುರಾಧಾರ್ಕಃ೨೬ ತುಲಾಚ೧೪‡ |

## ಕೇತಕೀ ದೃಕ್ಸಿದ್ಧರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 13 | ೬ | ರ೧೬\|\|\| | ಪೂ೪೭\|\|\| | ಶು೧೭\| | ವ೧೬\|\|\| | ೧೦॥ | ೪೨\|\|\| | ಜ್ಯೈ೧ಬು೪೨ ಶುಕ್ರಾಸ್ತಃಪಶ್ಚಿಮೆ |
| 14 | ೭ | ಚ೧೧ | ಆ್ಲ೪೪\| | ಶ್ಲ೯\|\| | ಬ೧೧ | ೧೭\|\|\| | ೪೦\|\| | ಸಿಂಹೆಚ೪೪\| ಹ೪ಕು೪೯ |
| 15 | ೮ | ಕು೬ | ಮ೪೧॥ | ಬ್ರ೨॥ ಉಪ೫೩\|\|\| | ಕೌ೬ | ೧೨॥ \|\|\| ವಿ | ೩೫\|\|\| | ವಿ೪ರ ವೃಶ್ಚಿಕಸಂಕ್ರಮಣ೫೮\|೨೨ |
| 16 | ೯ | ಬು೨\|\| ಉಪ೫೪\|\|\| | ಪೂ೩೯\|\| | ವೈ೫೦॥ | ಗ೨\|\| | ೫೭ ಶೆ೧ವಿ | ೨೪ | ಕನ್ಯಾಚ೫೪\|ಜ್ಯೈ೨ಬು೯ಆ್ನ೧ವಶು೧೩ |
| 17 | ೧೧ | ಗು೫೬ | ಉ್ತ೩೮॥ | ವ್ಯ೪೫\|\| | ಬ೨೭\|\|\| | ೫೯\| ಶೆ೩\|ವಿ | ೨೦\|\|\| | ಸ್ಮಾರ್ತಾನಾಂ೧೧ [†ಶನಿಪ್ರದೋಷಃ |
| 18 | ೧೨ | ಶು೫೫ | ಹ್ತ೩೮\|\| | ಪ್ರೀ೪೧\| | ಕೌ೨೫\|\| | ೫೮\|\|\| ಶೆ೨\|\|\| | ೨೩\|\| | ಜ್ಯೈ೩ಬು೪೧ಭಾ. ವೈಷ್ಣವಾನಾಂ೧೧ |
| 19 | ೧೩ | ಶ೫೪\|\|\| | ಚಿ೩೯\|\| | ಆ೩೮ | ಗ೨೫ | ವಿ೫೪ | ೨೩। | ಅನುರಾಧಾರ್ಕ೩೧೬॥ ತುಲಾರ್ಚ† |

# ಈ ವಾರದಲ್ಲಿ
# ನಿಮ್ಮ ಭವಿಷ್ಯವು ಹೇಗಿದೆ ?

ತಾ. ೧೪-೧೧-'೩೮ರಿಂದ

ತಾ. ೨೦-೧೧-'೩೮ರ ವರೆಗೆ.

## ಮೇಷ

ನಿಮ್ಮ ಅಂತಃಕರಣದಲ್ಲಿ ಭಯ ಶೋಕಗಳು ಹೆಚ್ಚಾಗಿದ್ದು ಮನಸ್ಸಿಗೆ ನೆಮ್ಮದಿಯು ಸ್ವಲ್ಪ ಕಡಿಮೆಯಾದೀತು. ವಿನಹ ಇತರ ಭಾಗದಲ್ಲಿ ನೀವು ಬಹಳ ಸುಧಾರಿಸಿರುವಿರಿ. ಶತ್ರುಗಳು ಮಿತ್ರರಾಗುವರು. ಮಿತ್ರವೃಂದವು ಅಭಿವೃದ್ಧಿಯನ್ನೈದುವುದು. ಸರ್ವತ್ರ ಸ್ಥಾನಮಾನಗಳು ದೊರೆಯುವವು. ಹಿಡಿದ ಕಾರ್ಯಗಳು ಲಾಭದಾಯಕವಾಗಿಯೂ ಜಯಶೀಲವಾಗಿಯೂ ಕೊನೆಗೊಳ್ಳುವವು. ಆರೋಗ್ಯದ ವಿಷಯವಾಗಿಯಾಗಲಿ ಧನದ ವಿಷಯವಾಗಿಯಾಗಲಿ ನೀವು ಎಳ್ಳಷ್ಟೂ ಚಿಂತಿಸಬೇಕಾಗಿಲ್ಲವು. ವಿದ್ಯೋಪಜೀವಿಗಳಿಗೂ, ವಿದ್ಯಾಭಿಲಾಷಿಗಳಿಗೂ ಕೂಡ ಈ ವಾರವು ಬಹಳ ಒಳ್ಳೆಯ ಸ್ಥಿತಿಯಲ್ಲಿರುವುದು. ವಾರದ ಅಂತ್ಯಾರ್ಧವು ಎಲ್ಲಾ ವಿಧದಿಂದಲೂ ಉತ್ತಮವಾಗಿರುವುದು.

## ವೃಷಭ

ಕಾಮ ಕ್ರೋಧಾದಿ ಷಡ್ವೈರಿಗಳಲ್ಲೊಂದಾದ ಕೋಪವು ನಿಮ್ಮನ್ನು ಸಂಪೂರ್ಣ ಆವರಿಸಿರುವುದು. ಇದು ಮನುಷ್ಯನ ದೇಹದಲ್ಲಿಯೇ ವಾಸಮಾಡಿಕೊಂಡಿರತಕ್ಕ ಮಹಾ ಶತ್ರುವು. ಇದನ್ನು ಜಯಿಸುವುದು ನಮ್ಮ ಆದ್ಯ ಕರ್ತವ್ಯ. ಕಾರಣ ನೀವು ಸಿಟ್ಟಿನ ಆವೇಗದಿಂದಾಗಿ ಯಾವ ಕಾರ್ಯವನ್ನೂ ಪೂರ್ವಾಪರ ವಿಚಾರ ಮಾಡದೆ ಮಾಡುವಿರಿ. ಅದುಕಾರಣ ಅದಕ್ಕೆ ತಕ್ಕ ಪ್ರತಿಫಲವು ನಿಮಗೆ ಕೂಡಲೇ ದೊರೆಯದಿರದು. ಈ ವಾರವು ಹೆಚ್ಚಿನಭಾಗದಲ್ಲಿ ನಿಮಗೆ ಅನಿಷ್ಟಕಾರಕವಾಗಿರುವುದರಿಂದ ಶತ್ರುಗಳಿಂದ ಹೆಚ್ಚಾಗಿ ಪೀಡಿಸಿಕೊಳ್ಳಲ್ಪಡುವಿರಿ. ಖರ್ಚುಗಳು ಆಯಕ್ಕಿಂತಲೂ ಅಧಿಕವಾಗಿ ಹಣದ ವಿಷಯವಲ್ಲಿ ಕೈಕಟ್ಟುವುದು. ದೇಹಾಲಸ್ಯವೂ ಸ್ತ್ರೀಪೀಡೆಯೂ ಅಧಿಕವಾಗಿ ತತ್ಸಂಬಂಧ ಧನವ್ಯಯವಾಗುವುದು. ತಾ. 15ರಿಂದ 18ರ ವರೆಗೆ ಹೆಚ್ಚಿನ ಹಾನಿಕಾರಕವಾದ ಪ್ರಸಂಗಗಳೊದಗುವವು.

## ಮಿಥುನ

ಈ ವಾರದಲ್ಲಿ ನಿಮಗೆ ಶುಭಾಶುಭ ಫಲಗಳು ಮಿಶ್ರವಾಗಿದ್ದು ಫಲಕೊಡುವವಾದರೂ ಅವುಗಳ ಪೈಕಿ ಹೆಚ್ಚಾಗಿ ಅನಿಷ್ಟ ಫಲಗಳು ನಿಮಗೆ ಕಾರ್ಯರೂಪದಲ್ಲಿ ತೋರಿಬರುವವು. ನಿಮ್ಮ ಹೃದಯದಲ್ಲಿ ಪರರ ಹಾನಿಯನ್ನೇ ನೀವು ಎಣಿಸುತ್ತಿದ್ದು ಬಾಯಲ್ಲಿ ಮಾತ್ರ ಅದಕ್ಕೆ ವಿಪರೀತವಾಗಿ ವರ್ತಿಸುವಿರಿ. ಆದರದು ಬಯಲಿಗೆ ಬಿದ್ದು ನೀವು ಜನರಿಂದ ಕೆಟ್ಟಮಾತುಗಳನ್ನು ಕೇಳುವಿರಿ. ಶತ್ರುಗಳ ಪೀಡೆಯು ಅಧಿಕವಾಗಿದ್ದು ಕಾರ್ಯಗಳಲ್ಲೆಲ್ಲಾ ಸೋಲೇ ಪ್ರಾಪ್ತಿಯಾಗುವುದು. ಆರೋಗ್ಯವು ಕೆಟ್ಟು ಉರಿಜ್ವರ, ಉದರನೋವು ಇತ್ಯಾದಿ ದೋಷಗಳು ಹೆಚ್ಚಿ ಬಹಳ ಕ್ಲೇಶಗೊಳ್ಳುವಿರಿ. ವಿದ್ಯಾಭಿಲಾಷಿಗಳಿಗೆ ಈ ವಾರವು ಬಹಳ ಕಷ್ಟದಿಂದ ಕಳೆಯಬೇಕಾಗುವುದು. ತಾ. 15, 16ರಲ್ಲಿ ಕೆಲವು ಕಾರ್ಯಗಳಲ್ಲಿ ಜಯವೂ, ಧನಲಾಭವೂ ಆಗುವುದು. ಸ್ತ್ರೀ ಸುಖವನ್ನು ಪಡೆಯುವಿರಿ.

## ಕರ್ಕಾಟಕ

ನಿಮಗೀವಾರದಲ್ಲಿ ಅನೇಕ ವಿಧದಿಂದ ಧನಲಾಭವಾಗುವ ಯೋಗವಿದೆ. ಸ್ಥಾನಪ್ರಾಪ್ತಿಯ ಸಂಭವವೂ ಇದೆ. ಆದಕಾರಣದಿಂದಲೇ "ಸರ್ವೇ ಜನಾಃ ಕಾಂಚನಮಾಶ್ರಯಂತಿ" ಎಂದಂತೆ ಎಲ್ಲಾ ಜನರೂ ಧನವನ್ನೇ ಅಪೇಕ್ಷಿಸುವುದರಿಂದ ನಿಮ್ಮಲ್ಲಿರುವ ಹಣಕ್ಕಾಗಿ (ನಿಮಗಾಗಿ ಅಲ್ಲ) ಅನೇಕ ಬಂಧುಗಳು, ಮಿತ್ರರು ನಿಮ್ಮನ್ನು ಸೇರುವರು. ನಿಮಗೆ ಸಿಕ್ಕಿದ ಧನವಾದರೋ ನಿಮ್ಮ ಕೈಯಲ್ಲಿ ಸ್ವಲ್ಪವೂ ಉಳಿಯಲಾರದು. ಯಾಕಂದರೆ ಶರೀರವು ಹೆಚ್ಚಿನ ರೋಗಬಾಧೆಗೆ ಸಿಲುಕುವುದರಿಂದ ತನ್ನಿವಾರಣೆ

ಗಾಗಿಯೂ, ಶತ್ರು ಪೀಡಾ ನಿವಾರಣೆಗಾಗಿಯೂ, ಇತರ ಅನೇಕ ರೀತಿಯ ಖರ್ಚಿನ ದಾರಿಗಳೂ ಹೆಚ್ಚುವುದರಿಂದ ತದ್ವಿಷಯಕವಾಗಿಯೂ ಧನ ವ್ಯಯವಾಗುವುದು. ಅನಾಚಾರಿಗಳಾದ ನಿಮಗೆ ನಿಮ್ಮ ಹೃದ್ರೋಗದಿಂದಾಗಿ ಜನರಲ್ಲಿ ವೈರಭಾವವು ಹೆಚ್ಚುವುದು. ತಾ. 15, 16, 19 ಈ ದಿನಗಳು ಬಹಳ ಅನಿಷ್ಟದಾಯಕಗಳಿರುವವು.

## ಸಿಂಹ

ನಿಮ್ಮ ಅದೃಷ್ಟದರ್ಶಕರಾದ ದ್ವಿವಿಧ ಗ್ರಹರು ಅವರವರ ಹುಟ್ಟುಗುಣವನ್ನನುಸರಿಸಿ ದ್ವಿವಿಧಭಾವವನ್ನು ಹೊಂದಿರುವರು. ಅಂದರೆ ಶುಭಗ್ರಹರಾದ ಬುಧ, ಗುರು, ಶುಕ್ರರು ಶುಭಸ್ಥಾನದಲ್ಲಿದ್ದು ಶುಭದಾಯಕರಾಗಿಯೂ ಇತರ ಪಾಪಿಗ್ರಹರು ಅನಿಷ್ಟಸ್ಥಾನದಲ್ಲಿದ್ದು ಅಶುಭಾಕಾಂಕ್ಷಿಗಳಾಗಿಯೂ ಇರುವರು. ಆದಕಾರಣ ನಿಮಗೀವಾರದಲ್ಲಿ ಮಿಶ್ರಫಲವೇ ಲಭಿಸುವುದಾದರೂ, ಸತ್ಕರ್ಮಾಚಾರಿಗಳಿಗೆ ಹೆಚ್ಚಾಗಿ ಶುಭಫಲವೂ ದುರಾಚಾರಿಗಳಿಗೆ ಅಶುಭ ಫಲಗಳೂ ಲಭಿಸುವವು. ಶುಭಗ್ರಹರಿಂದಾಗಿ ಸಮಾಜದಲ್ಲಿ ಗೌರವ ಸಿಗುವದು. ಬಂಧುಗಳು, ಮಿತ್ರರು ಮತ್ತು ಕುಟುಂಬವು ವೃದ್ಧಿಯನ್ನೈದುವುದು, ವ್ಯಾಪಾರಾದಿಗಳಲ್ಲಿ ಹೆಚ್ಚಿನ ಧನಲಾಭವಾಗುವುದು. ಬುದ್ಧಿವಂತಿಕೆಯು ಹೆಚ್ಚುವದು. ನಿದ್ರಾಶನಗಳು ಸುಖವಾಗಿ ಆಗುವವು. ಪಾಪಿಗ್ರಹರಿಂದಾಗಿ ರಾಜಪೀಡೆ, ಮಾನಹಾನಿ, ಧನವ್ಯಯ, ಪಿತ್ಥೋಷ್ಣಸಂಬಂಧಿ ರೋಗಪೀಡೆ, ಕ್ಲೇಶ ವಗೈರೆಗಳು ಹೆಚ್ಚುವವು. ತಾ. 15, 16, 19ರಲ್ಲಿ ಗ್ರಹಾನುಕೂಲ್ಯವು ಉತ್ತಮವಿದೆ.

## ಕನ್ಯಾ

ನಿಂತಲ್ಲಿ ನಿಲ್ಲದೆ ಊರೂರು ಅಲೆಯುವ ಸ್ವಭಾವವು ನಿಮ್ಮದಾಗಿರುವುದು. ನೀವು ತಿಳಿದೂ ತಿಳಿದು ಕೆಲವು ಮಾಡಬಾರದ ಕಾರ್ಯಗಳನ್ನು ಮಾಡಿ ಅಧಿಕಾರಿಗಳ ಭೀತಿಗೂ ಶತ್ರುಗಳ ಪೀಡೆಗೂ ಒಳಗಾಗುವಿರಿ. ಕೆಲವು ಕಾರ್ಯಗಳಲ್ಲಿ ನೀವು ಮಿತ್ರರ ಸಹಾಯದಿಂದಾಗಿ ಜಯಶೀಲರಾಗಿ ಧನಲಾಭ ಹೊಂದುವಿರಿ. ಮಾತ್ರವಲ್ಲ, ಸ್ಥಾನಮಾನಗಳ ಪ್ರಾಪ್ತಿಯೂ ಆಗುವುದು. ಮನಸ್ಸಿನಲ್ಲೇನೋ ತಾನು ಸುಖಿಯಾಗಿರುವೆನೆಂಬ ಭಾವನೆಯು ಹುಟ್ಟುವದು. ಆದರದು ಕನಸಿನಲ್ಲಿ ಕಂಡ ವಿಷಯಗಳಂತೆ ಅಲ್ಪಾವಕಾಶದಲ್ಲೇ ಮಾಯವಾಗುವುದು. ನಿಮ್ಮ ಖರ್ಚಿನಭಾಗಕ್ಕಾಗಿ ನೀವು ಚಿಂತಿಸಬೇಕಾಗಿಲ್ಲವು. ಶರೀರಾರೋಗ್ಯವು ಚೆನ್ನಾಗಿದ್ದರೂ ಅಕಸ್ಮಾತ್ತಾಗಿ ಗಾಯ, ಕಜ್ಜಿ ಇತ್ಯಾದಿಗಳುಂಟಾಗುವವು. ತಾ. 15, 16, ಮತ್ತು 19 ಈ ದಿನಗಳಲ್ಲಿ ಹೆಚ್ಚಿನ ಧನವ್ಯಯವಾಗಲಿದೆ.

## ತುಲಾ

ಹೆಚ್ಚಿನಂಶ ಈ ವಾರವು ನಿಮಗೆ ಅನುಕೂಲವೇ ಆಗಿರುವುದು. ಸುಸ್ಥಾನಾಪನ್ನರಾದ ಗ್ರಹರ ಅನುಗ್ರಹದಿಂದಾಗಿ ಗೃಹದಲ್ಲಿ ದವಸಧಾನ್ಯಗಳ ಸಂಗ್ರಹವಾಗುವುದು. ಆರಂಭಿಸಿದ ಕಾರ್ಯಗಳು ಕೊನೆಹೊಂದಿ ತನ್ಮೂಲಕವಾಗಿ ಧನಲಾಭವಾಗುವುದು. ಶತ್ರುಗಳು ನಿರ್ನಾಮ ಹೊಂದುವರು. ಪಶುಪುತ್ರಾದಿ ಪರಿಜನರಿಂದೊಡಗೂಡಿದ ಗ್ರಹಸಂಪತ್ತಿನಿಂದ ಕೂಡಿದ ನೀವು ಭೂಪಾಲನಂತೆ ದಿನಗಳೆಯುವಿರಿ. ವಿಮುಖರಾದ ಇತರ ಗ್ರಹರ ದೆಸೆಯಿಂದ ನಿಮ್ಮಲ್ಲಿ ಭಯ ಮತ್ತು ಅವಿಶ್ವಾಸವು ಹೆಚ್ಚಿ ಮಾನಸಿಕ ಸುಖವನ್ನು ನಾಶಮಾಡುವುದು. ಪಿತ್ಥಸಂಬಂಧವಾದ ವ್ಯಾಧಿಗಳು, ತಲೆನೋವು, ಕಣ್ಣುನೋವು ಇತ್ಯಾದ್ಯನರ್ಥಗಳ ಸಲುವಾಗಿ ಹೆಚ್ಚಿಗೆ ಧನವ್ಯಯವಾಗುವುದು. ಸ್ತ್ರೀಯರಿಂದಾಗಿ ಅನಿಷ್ಟಗಳೂ ಸಂಭವಿಸಲಿವೆ. ತಾ ೧೭, ೧೮ರ ಮಟ್ಟಿಗೆ ಧನ ಮತ್ತು ಆರೋಗ್ಯ ಭಾಗದಲ್ಲಿ ಜಾಗರೂಕರಾಗಿರತಕ್ಕದ್ದು.

## ವೃಶ್ಚಿಕ

ಇಷ್ಟಾನಿಷ್ಟಗಳು ಮಿಶ್ರವಾಗಿ ನಿಮಗೀ ವಾರದಲ್ಲಿ ಸಮಾನ ರೀತಿಯಲ್ಲಿ ಅನುಭವಕ್ಕೆ ಬರುವವು. ವ್ಯವಹಾರದಲ್ಲಿ ಕಲಹವು ಹೆಚ್ಚಿ ಕೋರ್ಟು ಕಛೇರಿಗಳಿಗೆ ಹತ್ತಿಳಿವ ಪ್ರಸಂಗ ಬರುವುದು. ಇದರಿಂದಾಗಿ ಹೆಚ್ಚಿನ ನಷ್ಟಕಷ್ಟಗಳಿಗೆ ಗುರಿಯಾಗುವಿರಿ. ಪುತ್ರ ವಿಷಯಕವಾದ ಶೋಕವು ಆರೋಗ್ಯವನ್ನು ಕೆಡಿಸುವುದು. ಆದರೂ ಇತರ ಸಂಸಾರಸಂಬಂಧವಾದ ತಾಪತ್ರಯವು ನಿಮಗಿಲ್ಲವೆಂದೇ ಹೇಳಬಹುದು. ಪರಕೀಯಳಾದ ಸ್ತ್ರೀಯಳಿಂದ ಧನಸಿಗುವ ಯೋಗವಿದೆ. ಸ್ತ್ರೀ ಸುಖಕ್ಕೆ ಆವ ಭಾಗದಲ್ಲಿಯೂ ಹಾನಿಯಿಲ್ಲವು. ತಾ. ೧೫ರಿಂದ ೧೮ರ ವರೆಗಿನ ದಿನಗಳು ಉತ್ತಮವಿರುವುದರಿಂದ, ಮಿತ್ರ ಸಮಾಗಮ, ಇಷ್ಟ ಕಾರ್ಯಸಿದ್ಧಿ, ಧನಲಾಭವೂ ಆಗಲಿದೆ.

## ಧನು

ಕೆಲವು ವಾರಗಳಿಂದ ನಿಮ್ಮ ಗ್ರಹಗತಿಯು ಕೊಂಚ ಮಟ್ಟಿಗೆ ಸುಧಾರಣೆಯಾಗಿತ್ತು. ಆದೇನೋ ಈ ವಾರದಲ್ಲಿ ಪುನಃ ಹೀನಸ್ಥಿತಿಗಿಳಿದಿರುವುದು. ಆದರೂ ತಾತ್ಕಾಲಿಕ ವಾದ ಖರ್ಚಿಗೆ ನಿಮಗೇನೂ ಕಡಿಮೆಯಾಗಲಾರದು. ಶತ್ರು ಪೀಡೆಯು ಸರ್ವತ್ರ ನಿಮ್ಮನ್ನಿದಿರುಗೊಳ್ಳುವದು. ಈ ಕಾರಣದಿಂದಾಗಿ ಕಾರ್ಯಗಳನ್ನು ಕೊನೆಗೊಳಿಸಲು ನಿಮಗೆ ಸಾಧ್ಯವಾಗುವಂತಿಲ್ಲ. ದೇಹಾರೋಗ್ಯವು ಸಂಪೂರ್ಣ ನಾಶವಾಗಿ ಪಿತ್ಥವಿಕಾರದ ರೋಗಗಳು, ಅವ ಯವಗಳ ನೋವು, ಶಿರೋವೇದನೆ ಇತ್ಯಾದಿಗಳು ಹೆಚ್ಚು ವವು. ಈ ಅನಿಷ್ಟಗಳಿಂದ ಪೀಡಿತರಾದ ನಿಮ್ಮ ಮನಸ್ಸು ಕಲುಷಿತವಾಗಿ ಚಂಚಲವಾಗುವುದು. ಮಿತ್ರರೂ, ಪತ್ನಿಯೂ ನಿಮ್ಮ ಭಾಗಕ್ಕೆ ಇದ್ದರೂ ಇಲ್ಲ ದಂತೆಯೇ ಆಗಿ ತೋರಿಬರುವರು. ತಾ ೧೩ರಿಂದ ೧೬ರ ವರೆಗಿನ ದಿನಗಳು ಹೆಚ್ಚಿನ ಹಾನಿಕರಗಳಾಗಿರುವವು. ಬಂಧನಾದ್ಯನಿಷ್ಟಗಳೂ, ಅಪಮೃತ್ಯು ಸದೃಶವಾದ ಆಪತ್ತುಗಳೂ ಬಂದೊದಗುವವು.

## ಮಕರ

ಯಾವ ಭಾಗದಲ್ಲೂ ನಿಮಗೆ ಸಮಾನರು ಬೇರೆ ಯಾರೂ ಇಲ್ಲವೆಂದರದು ತಪ್ಪಾಗದು. ಕಾರಣವೇನೆಂ ಬಿರಾ? ಕುಜನನ್ನುಳಿದು ಇತರ ಸರ್ವ ಗ್ರಹರೂ ನಿಮ್ಮ ಮೇಲೆ ಸಂಪೂರ್ಣ ಅನುಗ್ರಹ ಮಾಡಿರುವರು ಆದ ಕಾರಣ ಸರ್ವರಿಂದಲೂ ಮಾನ್ಯರಾದ ನೀವೇ ಧನ್ಯರು. ನವೀನ ಕಾರ್ಯವನ್ನು ಪ್ರಾರಂಭಿಸಲು ನಿಮಗೆ ಈ ವಾರವು ಬಹಳ ಅನುಕೂಲವಿರುವುದು. ನೀವೀ ವಾರ ದಲ್ಲಿ ಯಾವ ಕಾರ್ಯವನ್ನು ಮಾಡಿದರೂ ಅದು ಸಸೂತ್ರ ವಾಗಿಯೂ ನಿಮಗನುಕೂಲವಾಗಿಯೂ ಕೊನೆಗೊಳ್ಳು ವುದು. ಎಲ್ಲಾ ವಿಷಯಗಳಲ್ಲೂ ನೀವು ಅಭಿವೃದ್ಧಿಯ ನ್ನೈದುವಿರಿ. ಮಿತ್ರರು ಬಂಧುಗಳು ನಿಮಗೆ ಬೇಕಾ ದಾಗ ಏನು ಮಾಡಲೂ ಸಿದ್ಧರಿರುವರು. ನಿಮಗಾರೂ ಶತ್ರುಗಳು ಕಂಡು ಬರುವುದೇ ಇಲ್ಲ. ಅಂತೂ ಈ ವಾರ ದಲ್ಲಿ ನಿಮ್ಮ ಆರ್ಥಿಕ ಸ್ಥಿತಿಯು ಬಹಳ ಸುಧಾರಿಸಿರುವುದು. ಆದ್ದರಿಂದಲೇ ಸರ್ವರೂ ನಿಮ್ಮನ್ನನುಸರಿಸಲು ಕಾರಣ. ವಾರದ ಆದ್ಯಂತ ದಿನಗಳು ಸರ್ವ ವಿಧದಲ್ಲೂ ಉತ್ತಮ ಗಳಾಗಿವೆ.

## ಕುಂಭ

ನಿಮ್ಮ ಗ್ರಹಮಾನವು ಈ ವಾರದಲ್ಲಿ ಹೆಚ್ಚಿನಂಶ ಕೆಟ್ಟು ಹೋಗಿರುವುದರಿಂದ ಎಷ್ಟು ಜಾಗ್ರತೆಯಲ್ಲಿದ್ದರೂ ನಿಮಗೆ ಅಪಾಯ ತಪ್ಪದು. ಇದ್ದರೂ ಕೂಡ ಕಳೆದ ವಾರಕ್ಕಿಂತ ಸ್ವಲ್ಪ ಉತ್ತಮ ಸ್ಥಿತಿಯನ್ನೈದಿರುವುದೆಂದು ಹೇಳಬೇಕಾಗಿದೆ. ನಿಮ್ಮ ಮನೋಭೀಷ್ಟಗಳೆಲ್ಲವೂ ತಮ್ಮಂತೆಯೇ ಕೊನೆಗೊಳ್ಳುವುವಲ್ಲದೆ ಶಯನ ಸುಖ ವನ್ನು ಕೂಡ ಅನುಭವಿಸುವಿರಿ. ಮಿತಭಾಷಿಯಾಗಿದ್ದರೂ ಕೂಡ ಕಲಹವು ಬೇರೆ ತಪ್ಪುವಂತಿಲ್ಲ. ಖರ್ಚಿನ ಭಾಗ ಗಳು ವೃದ್ಧಿಯಾಗುವವು. ಧನವ್ಯಯವಾದಂತೆ ನಿಮ್ಮ ಬುದ್ಧಿಯೂ ಕೂಡ ಶೈಥಿಲ್ಯವನ್ನು ಹೊಂದುವುದು. ಶತ್ರುಗಳಿಂದಾಗಿ ದೇಹಕ್ಕೆ ಅಪಾಯ ಸಂಭವಿಸಬಹುದು. ತಾ ೧೭, ೧೮, ೧೯ ಈ ದಿನಗಳು ಹೆಚ್ಚಿನಂಶ ಕಷ್ಟದಾಯಕ ಗಳಾಗಿರುತ್ತವೆ.

## ಮೀನ

ದೈವವು ಅನುಕೂಲವಾಗಿದ್ದರೆ ಅದಕ್ಕನುಸಾರವಾಗಿ ಮಿತ್ರರು ಬಂಧುಗಳು ಸೇರಿ ಬೇಕಾದ ಸಹಾಯವನ್ನು ಮಾಡುವರು. ದೈವವೇ ಪ್ರತಿಕೂಲವಾಗಿದ್ದಾಗ ಇವ ರೆಲ್ಲರೂ ದೂರ ಸೇರಿ ಕೆಲವೊಮ್ಮೆ ಪ್ರತಿಕೂಲರಾಗಿ ವರ್ತಿಸಲಿಕ್ಕೂ ಹಿಂಜರಿಯಲಾರರು. ಇದು ಲೋಕ ರೂಢಿಯಾಗಿದೆ ಇದೇ ರೀತಿ ನಿಮಗೆ ಯಾರ ಅನು ಗ್ರಹವೂ ಇಲ್ಲ. ಆದರೆ ನಿಗ್ರಹಕ್ಕೆ ಮಾತ್ರ ಅನೇಕರು ಮುಂದಾಗಿದ್ದಾರೆ. ಇವರಿಂದಾಗಿ ಮನೋರೋಗವು ವೃದ್ಧಿಯಾಗುವುದು. ಶರೀರದ ಆರೋಗ್ಯವು ಉಳಿಯ ಲಾರದು. ಪರರ ಉಪಕಾರಕ್ಕಾಗಿ ಪ್ರವರ್ತಿಸಿದ ನಿಮಗೆ ಅಪಕೀರ್ತಿ ಸಿಗುವದು. ಕೈಯಲ್ಲಿ ಕಾಸಿಲ್ಲದೆ ಬಹಳ ಪೇಚಾಡುವಿರಿ. ಅಕಸ್ಮಾತ್ ಸಂಭವಿಸಿದ ಪ್ರವಾಸದಲ್ಲಿ ನಾನಾ ಕಷ್ಟಗಳನ್ನು ಅನುಭವಿಸುವಿರಿ. ಸಂಸಾರವು ಸುಗಮವಾಗಿ ಸಾಗದು. ಕಳತ್ರಳು ಕಲಹಕಾರಿಣಿ ಯಾಗುವಳು. ಹಣದ ಸಂಬಂಧವಾಗಿ ಜಗಳವಾಗು ವುದು. ವಾರದ ಆದ್ಯಂತ ದಿನಗಳಲ್ಲಿ ಜಾಗ್ರತೆಯಿಂದ ಇದ್ದಷ್ಟು ಒಳ್ಳಿತು

—ಬಾಲಭಾಸ್ಕರ.

# ಅಂತರಂಗ ಸ್ಪರ್ಧೆ

ನಂ. ೧.

## ಪ್ರಥಮ ಬಹುಮಾನ:- ರೂಪಾಯಿ ೨೫

**ದ್ವಿತೀಯ ಬಹುಮಾನ:-** ಒಂದು ತಪ್ಪಿರುವ ಪ್ರತಿಯೊಂದು ಉತ್ತರಕ್ಕೆ "Paryayam Souvenir" ಎಂಬ ಸಚಿತ್ರ ಪುಸ್ತಕ.

**ತೃತೀಯ ಬಹುಮಾನ:-** ಎರಡು ತಪ್ಪಿರುವ ಪ್ರತಿಯೊಂದು ಉತ್ತರಕ್ಕೆ "ಪುರಂದರದಾಸರ ಕೀರ್ತನೆ.

**ಸ್ಪರ್ಧೆಯಲ್ಲಿ ಭಾಗವಹಿಸುವವರಿಗೆ ಸೂಚನೆಗಳು:—**

ಈ ಸ್ಪರ್ಧೆಯ ಸರಿಯಾದ ಉತ್ತರವು 'ಅಂತರಂಗ'ದ ಸಂಪಾದಕರ ಬಳಿ ಮೊಹರು ಮಾಡಿ ಇಡಲಾಗಿದೆ. ಅದಕ್ಕೆ ಪ್ರತಿ ಅಕ್ಷರವೂ, ಸರಿಹೋಲತಕ್ಕ ಉತ್ತರಕ್ಕೆ ಮೊದಲನೆ ಬಹುಮಾನವೂ, ಒಂದು ಮತ್ತು ಎರಡು ತಪ್ಪಿರುವವುಗಳಿಗೆ ಎರಡು ಮತ್ತು ಮೂರನೆ ಬಹುಮಾನಗಳೂ ಕೊಡಲ್ಪಡುವುವು. ತಪ್ಪಾದ ಪ್ರತಿಯೊಂದು ಪದವೂ ಒಂದೊಂದು ತಪ್ಪಿನಂತೆ ಭಾವಿಸಲಾಗುತ್ತದೆ. ಬಹುಮಾನಕ್ಕೆ ಯೋಗ್ಯವಾದ ಉತ್ತರಗಳು ಒಂದಕ್ಕಿಂತ ಹೆಚ್ಚಾಗಿದ್ದಲ್ಲಿ ಮೇಲ್ಕಂಡ ಬಹುಮಾನಗಳು ಎಲ್ಲರಿಗೂ ಸರಿಸಮಾನವಾಗಿ ಹಂಚಲ್ಪಡುವುವು. ಬಹುಮಾನಗಳನ್ನು ಹಂಚುವ ವಿಚಾರ ಸ್ಪರ್ಧೆಯ ಮೆನೇಜರರಿಗೆ ಸೇರಿದುದು. ಈ ವಿಚಾರದಲ್ಲಿ ಯಾವ ಪತ್ರವ್ಯವಹಾರಗಳಿಗೂ ಅವಕಾಶವಿಲ್ಲ. ಪ್ರತಿ ಉತ್ತರಕ್ಕೂ ಪ್ರವೇಶ ಧನ ನಾಲ್ಕಾಣೆ. ಒಬ್ಬನು ಎಷ್ಟೂ ಉತ್ತರಗಳನ್ನು ಕಳುಹಿಸಬಹುದು. ಒಂದುರೂಪಾಯಿಗೆ ಐದು ಉತ್ತರಗಳನ್ನು ಕಳುಹಿಸಬಹುದು. ಪ್ರವೇಶ ಧನವನ್ನು ಪೋಸ್ಟಲ್ ಸ್ಟಾಂಪು, ಅಥವಾ ಇಂಡಿಯನ್ ಪೋಸ್ಟಲ್ ಆರ್ಡರ್ ಅಥವಾ ಮನಿ ಆರ್ಡರ್ ಮೂಲಕ ರವಾನಿಸಬಹುದು. ಉತ್ತರವನ್ನು ಬರೆಯತಕ್ಕವರು ದಶಂಬರ ೧೦ ರೊಳಗೆ ಬರೆದು ಕಳುಹಿಸಬೇಕು. ನಂತರ ಈ ಸ್ಪರ್ಧೆಗಾಗಿ ಕಳುಹಿಸುವ ಉತ್ತರಗಳನ್ನು ಸ್ವೀಕರಿಸುವುದಿಲ್ಲ. ಸರಿಯಾದ ಉತ್ತರವನ್ನು ದಶಂಬರ ೧೮ರ ಅಂತರಂಗದಲ್ಲಿ ಪ್ರಕಟಿಸಲಾಗುತ್ತದೆ. ಈ ಸ್ಪರ್ಧೆಯ ಉತ್ತರಗಳು ಅಂತರಂಗದ ಕೂಪನಿನಲ್ಲಿಯೇ ಬರೆಯಲ್ಪಡಬೇಕು. ಈ ಕೂಪನುಗಳು ಈ ಸಂಚಿಕೆಯ ಮೊದಲ್ಗೊಂಡು ಅಂತರಂಗದ ನಾಲ್ಕು ಸಂಚಿಕೆಗಳಲ್ಲಿ ಪ್ರಕಟಿಸಲ್ಪಡುತ್ತವೆ. ಉತ್ತರ ಕೊಡುವವರು ತಮ್ಮ ಪೂರ್ಣ ವಿಳಾಸವನ್ನು ಬರೆಯತಕ್ಕದ್ದು.

ಉತ್ತರಗಳು ಕೆಳಗಿನ ವಿಳಾಸಕ್ಕೆ ಕಳುಹಿಸಲ್ಪಡಬೇಕು.

**ಮೆನೇಜರ್, 'ಅಂತರಂಗ ಸ್ಪರ್ಧೆ', ಅಂತರಂಗ, ಉಡುಪಿ.**

**ವಿ. ಸೂ:** ಈ ಸ್ಪರ್ಧೆಯಲ್ಲಿ ಸಪ್ಲೈ ಏಜನ್ಸಿ, ಲಿಮಿಟೆಡ್, ಉಡುಪಿ—ಇದರ ಯಾವ ನೌಕರರಿಗೂ ಭಾಗವಹಿಸಲೆಡೆಯಿಲ್ಲ.

---

**ಸ್ಪರ್ಧೆಯನ್ನು ಮುಂದಿನ ಪುಟದಲ್ಲಿ ನೋಡಿರಿ.**

Printed and published by P. Venkataramanacharya and on behalf of SUPPLY AGENCY LTD., at Manipal Powe' Udipi.

| | | | | | | | | |
|---|---|---|---|---|---|---|---|---|
| ೧ | ೨ | ದ<br>೩ | ೪ | ೫ | | ೬ | ೭ | ನ<br>೮ |
| ೯ | | ೧೦ | | ೧೧ | ೧೨ | ೧೩ | | ೧೪ |
| ೧೫ | ೧೬ | ೧೭<br>ಹ | ೧೮ | | ೧೯ | | ೨೦ | ೨೧ |
| | ೨೨ | ೨೩ | | | | ೨೪ | ೨೫ | |
| ೨೬ | | ೨೭ | ೨೮ | | ೨೯ | ೩೦ | ಮ<br>೩೧ | ೩೨ |
| ೩೩ | ೩೪ | | ೩೫ | ೩೬ | ಕೆ<br>೩೭ | | ೩೮ | |
| ೩೯ | ಡಾ<br>೪೦ | ೪೧ | ೪೨ | | ೪೩ | ೪೪ | ದೆ<br>೪೫ | |
| ೪೬ | | ೪೭ | | ತ<br>೪೮ | ೪೯ | ಣ<br>೫೦ | | ಜ<br>೫೧ |
| ೫೨ | ೫೩ | ೫೪ | | ೫೫ | | ೫೬ | ೫೭ | ನ<br>೫೮ |

## ಎಡದಿಂದ ಬಲಕ್ಕೆ.

೧ರಿಂದ ೫ . . . . ವಾದ ಮಾತುಗಳಿಂದ ಇತರರಿಗೆ ಸಂತೋಷವಾಗುತ್ತದೆ

೬ ,, ೮ . . . . ಗಳನ್ನು ಮಾಡುವವರಿಗೆ ತುಂಬಾ ವಿಚಾರ ಶಕ್ತಿಯಿರಬೇಕಾಗುತ್ತದೆ.

೧೧ ,, ೧೩ ಸವಿ.

೧೫ ,, ೧೮ . . . ಉಡಿಗೆ ತೊಡಿಗೆಗಳಿಗಾಗಿ ಸ್ತ್ರೀಯರು ಹಂಬಲಿಸುತ್ತಾರೆ.

೨೦ ,, ೨೧ ಇದೊಂದನ್ನು ಬಿಟ್ಟರೆ ಹೊಟ್ಟೆ ತುಂಬಿಸಿಕೊಳ್ಳುವುದು ಕಷ್ಟವಲ್ಲ.

೨೨ ,, ೨೩ ಅತಿ . . . ಯಾಗಿರುವ ಪದಾರ್ಥಗಳನ್ನು ತಿಂದರೆ ಕೆಲವೊಮ್ಮೆ ಅನಾರೋಗ್ಯವುಂಟಾಗುತ್ತದೆ.

೨೪ ,, ೨೫ ದಟ್ಟ . . . ಗಳಲ್ಲಿ ಸಂಚರಿಸುವಾಗ ಜಾಗ್ರತೆಯಿಂದಿರಬೇಕಾಗುತ್ತದೆ.

೨೭ ,, ೨೮ ಋಷಿಗಳು ಇದರ ಬಲದಿಂದಲೇ ಜ್ಞಾನವನ್ನು ಸಂಪಾದಿಸುತ್ತಿದ್ದರು.

೨೯ ,, ೩೧ ನಲ್ಲೆಯರ . . . . ತುಟಿಗಳ ಕುರಿತು ಕವಿಗಳು ತುಂಬಾ ವರ್ಣಿಸಿದ್ದಾರೆ.

೩೩ ,, ೩೪ ಮ್ಯೂನಿಕ್ ಒಪ್ಪಂದದಲ್ಲಿ ರಷ್ಯವು . . . ವಹಿಸಲಿಲ್ಲ.

೩೫ ,, ೩೭ ಆಧುನಿಕ ಕನ್ನಡ ಕವಿತೆಯು ಛಂದಸ್ಸುಗಳೆಲ್ಲಾ ಇದರ ಪ್ರಭೇದಗಳು.

೩೯ ,, ೪೨ ಆರು ಆಗಮಗಳು.

೪೩ ,, ೪೫ ಡಿ. - ವೆಂಕಟಾಚಾರ್ಯರ ಕಾದಂಬರಿಗಳಲ್ಲೊಂದರ ಹೆಸರು.

೪೮ ,, ೫೦ ಜವಾಹರಲಾಲ ನೆಹರುಗಳು ಹಿಂದುಸ್ಥಾನದ . . . ರ ಧುರೀಣರಾಗಿದ್ದಾರೆ.

೫೨ ,, ೫೪ ಇವರ ಸಂಸ್ಕೃತಿಯು ಆರ್ಯರ ಸಂಸ್ಕೃತಿಗಿಂತಲೂ ಪ್ರಾಚೀನವಾದುದೆಂದು ಹೇಳುತ್ತಾರೆ.

೫೬ ,, ೫೮ ದುಷ್ಟರ . . . ಕ್ಕಾಗಿ ಪರಮಾತ್ಮನು ಅವತರಿಸುತ್ತಾನಂತೆ.

## ಮೇಲಿಂದ ಕೆಳಗೆ

೧ ,, ೧೫ ವಿಶ್ರಾಂತಿ.

೨೬ ,, ೫೨ ಈಗಿನ ರಾಷ್ಟ್ರಪತಿ.

೩೪ ,, ೪೦ ಗತಕಾಲಂ ಲಯಕಾಲಮಾಯ್ತು ನಿನಗಿನ್ನಾಯ್ತಂತ್ಯಕಾಲಂ . . . .

೩ ,, ೨೩ ಮುಗುಳು ನಗೆ.

೪೧ ,, ೫೪ ವಿಷ್ಣುವಿನ ವಾಹನ.

೨೮ ,, ೪೨ ಶ್ರೇಷ್ಠ.

೫ ,, ೧೧ ಇವನ ಲೋಕಕ್ಕೆ ಯಾರೂ ಹೋಗಲೊಪ್ಪುವುದಿಲ್ಲ.

೪೮ ,, ೫೫ ಕರೆ.

೧೨ ,, ೧೯ ಯುದ್ಧ.

೨೯ ,, ೪೯ ಇದು ಇಲ್ಲದಿದ್ದರೆ ಬೇಸಾಯ ಮಾಡುವುದು ಬಹಳ ಕಷ್ಟ.

೬ ,, ೧೩ ವಧುವಿನ . . . ಹಿಡಿವವನಿಗೆ ವರನೆನ್ನುತ್ತಾರೆ.

೨೪ ,, ೩೦ ವರನಿಗೆ ಕೈಕೊಡುವವಳಿಗೆ ಹೀಗೆನ್ನುತ್ತಾರೆ

೪೪ ,, ೫೬ . . . . ಹೆದರಿಕೆಯಿಂದ ಚೇಂಬರ್ಲೆನರು ಹಿಟ್ಲರನಿಗೆ ತಲೆಬಾಗಿದರು.

೨೦ ,, ೪೫ ದೇಹವನ್ನು ವಿಕ್ರಯಿಸಿಕೊಳ್ಳುವ ಸ್ತ್ರೀಯರಿಗೆ ಇದಿರುವುದಿಲ್ಲ.

೮ ,, ೨೧ ಹೊಸತು.

೫೧ ,, ೫೮ . . . ಇಲ್ಲದ ಊರಿಗೆ ಹಾಳೂರೆನ್ನುತ್ತಾರೆ.

(ಸ್ಪರ್ಧೆಯ ಕೂಪನುಗಳಿಗೆ ೩ಂನೆ ಪುಟ ನೋಡಿರಿ)